ಪ್ರಚಾರ ಗ್ರಂಥಮಾಲಾ, ಕುಸುಮ ೫

# ಬಮ್ಮೆರ ಪೋತನ

(ಭಾಗ ೧)



ಲೇಖಕ:

ಲಕ್ಷ್ಮೀನರಸಿಂಹ



ಕನ್ನಡ ಸಾಹಿತ್ಯ ಸೇವಾ ಸದನ

ಸಂತೇಕಲ್ಲುಹಳ್ಳಿ, ಚಿಂತಾಮಣಿ ತಾಲ್ಲೂಕು.

ಪ್ರಚಾರ ಗ್ರಂಥಮಾಲಾ, ಕುಸುಮ ೫

# ಬಮ್ಮೆರ ಪೋತನ



ಲೇಖಕ :

ಲಕ್ಷ್ಮೀನರಸಿಂಹ



ಕನ್ನಡ ಸಾಹಿತ್ಯ ಸೇವಾ ಸದನ

ಸಂತೇಕಲ್ಲುಹಳ್ಳಿ, ಚಿಂತಾಮಣಿ ತಾಲ್ಲೂಕು.

ಆ ಮಹಾನುಭಾವನ ದಿವ್ಯ ಚರಿತ್ರೆಯನ್ನು ಕರ್ಣಾಟಕ ಜನತೆಗೂ ಪರಿಚಯ ಗೊಳಿಸಲೆಳೆಸಿ ಶ್ರೀಮಾನ್ ಲಕ್ಷ್ಮೀನರಸಿಂಹಶಾಸ್ತ್ರಿಗಳವರು, ಸುಮಧುರವಾದ ತಮ್ಮ ತಿಳಿಗನ್ನಡ ಭಾಷಾಶೈಲಿಯಲ್ಲಿ ಈ ಗ್ರಂಥವನ್ನು ರಚಿಸಿ, ಕನ್ನಡ ವಾಚಕ ವೃಂದಕ್ಕೆ ಮಹೋಪಕಾರ ಮಾಡಿದ್ದಾರೆ. ಸರ್ವಸಾಮಾನ್ಯ ಸ್ಥಿತಿಯಲ್ಲಿದ್ದ ಆತನಲ್ಲಿ ಶ್ರೀರಾಮ ಭಕ್ತಿ ಭಾಗ್ಯವು ಬೆಳೆದು ಬಂದು, ಆತನು ಕ್ರಮವಾಗಿ ಶ್ರೀರಾಮಾನುಗ್ರಹಕ್ಕೆ ಪಾತ್ರನಾಗಿ, ಗ್ರಂಥರಚನೆಗೆ ತೊಡಗಿ, ಅನೇಕ ವಿಘ್ನ ಪರಂಪರೆಗಳನ್ನು ದಾಟಿ, ಕೊನೆಗೂ ತನ್ನ ಕಾರ್ಯದಲ್ಲಿ ಹೇಗೆ ಕೃತ ಕೃತ್ಯನಾದನೆಂಬ ಸಮಗ್ರ ಕಥೆಯೂ ಈ ಚಿಕ್ಕ ಪುಸ್ತಕದಲ್ಲಿ ರಮ್ಯವಾಗಿ ವರ್ಣಿಸಲ್ಪಟ್ಟಿದೆ. ಶ್ರೀಮಾನ್ ಶಾಸ್ತ್ರಿಗಳವರು ತಮ್ಮ ಜೀವಿತವನ್ನು ಸಾಹಿತ್ಯ ಸೇವೆ ಮತ್ತು ಗ್ರಾಮಾಂತರಗಳಲ್ಲಿ ಸಾಹಿತ್ಯ ಪ್ರಚಾರ ಈ ಸತ್ಕಾರ್ಯಕ್ಕಾಗಿಯೇ ವಿನಿಯೋಗಿಸುತ್ತಾ, ಅನೇಕಮಂದಿ ವಚನ ಶೂರರಿಗೆ ಆದರ್ಶ ಪ್ರಾಯರಾಗಿದ್ದಾರೆ. ಇವರು ಕೈಕೊಂಡಿರುವ ಈ ಗ್ರಂಥ ಲೇಖನ ವ್ಯವಸಾಯವು ಯಶಸ್ವಿಯಾಗಿ ನಡೆದು ತನ್ಮೂಲಕ ವಿಶೇಷ ಲೋಕೋಪಕಾರವಾಗುವಂತೆ ಶ್ರೀರಾಮಾನುಗ್ರಹವಾಗಲಿ ಎಂದು ಹಾರೈಸುತ್ತೇನೆ.

ಇಂತು ಸುಜನ ವಿಧೇಯ,

**ಯಂ. ರಾಮರಾವ್**
ಸಂಪಾದಕ 'ಸುಬೋಧ'

ಬೆಂಗಳೂರು,
ತಾ॥ ೨೬-೧೦-೧೯೪೬.

# ಲೇಖಕನ ಎರಡು ಮಾತು

---

ಪರಮಾತ್ಮನ ಸ್ವರೂಪವೇ ಲೋಕವೆಂದೂ, ಲೋಕ ಸೇವೆಯೇ ಪರಮಾತ್ಮನ ಸೇವೆಯೆಂದೂ ನಂಬಿ ಕೆಲಸ ಮಾಡಿದಾತನು ಪೋತನ. ಲೋಕಸೇವೆಯ ಅಭಿಲಾಷೆಯುಳ್ಳವನು ಸ್ವಾರ್ಥಪರನಾಗಿರಬಾರದೆಂಬುದೇ ಈತನ ನಿಶ್ಚಯ. ಸ್ವಾಭಿಮಾನಿಗಳು ಲೋಕಸೇವೆಯನ್ನು ಮಾಡಿ ಪರಮಾರ್ಥ ಸಿದ್ಧಿಯನ್ನು ಪಡೆಯಲಾರರೆಂಬ ತಿರುಳನ್ನು ಜನರ ಮುಂದಿಡಬೇಕೆಂಬುದೇ ಕಥಾಲೇಖಕನ ಅಭಿಮತ.

ಲೇಖಕನು ಹಳ್ಳಿಯ ನಿವಾಸಿ. ಹಳ್ಳಿಯಲ್ಲಿ ಸಾಹಿತ್ಯ ಸೇವೆಯೆಂದರೆ ಎಲ್ಲರೂ ನಗುವ ಮಾತೇ! ಅದರಲ್ಲಿಯೂ ಪುಸ್ತಕ ಪ್ರಚಾರವೆಂಬುದು ತೀರಾ ಅಸಾಧ್ಯ ವಿಷಯ. ಹೀಗಿದ್ದರೂ ಅನೇಕ ಮಾನ್ಯ ಉದಾರಿಗಳ ನೆರವು ಭಾಷಾ ಸೇವಕರಾದ ಮಹನೀಯರ ಸೇವಾ ಫಲವೇ ಲೇಖಕನಿಗೆ ಒಂದು ಉತ್ತೇಜನ.

ಪೋತನಾಮಾತ್ಯನ ಜೀವನ ಚರಿತ್ರೆಯನ್ನು ಬರೆದು ನಾಲ್ಕೈದುವರ್ಷಗಳಾದರೂ ಅನೇಕ ತೊಂದರೆಗಳಿಂದ ಅಚ್ಚು ಮಾಡಿಸುವುದು ನಿಧಾನವಾಗಿ ಇದಕ್ಕಾಗಿ ಬಹಳಮಟ್ಟಿಗೆ ನೆರವು ಕೊಟ್ಟು ಅಚ್ಚಾಗಲು ಸಹಾಯಕರಾಗಿ ನಿಂತು ಪ್ರೋತ್ಸಾಹಗೊಳಿಸಿದ ಶ್ರೀಯುತರುಗಳಾದ ಹಂಡಿಗನಾಳದ ಚಿಕ್ಕೇಗೌಡರು, ಸಂತೆಕಲ್ಲುಹಳ್ಳಿ ಬಿ. ಹುಚ್ಚಪ್ಪನವರು, ಕಾಡಹಳ್ಳಿ ಮಸ್ತಾನ್ ಸಾಬರು, ಭಾರತಿ ಶ್ರೀನಿವಾಸಮೂರ್ತಿಗಳು, ಆನೂರು ಮುನೇಗೌಡರು ಇವರಿಗೆ ಲೇಖಕನು ಕೃತಜ್ಞ. ಅಚ್ಚಾಗಲು ಬಹಳಮಟ್ಟಿಗೆ ಸಹಾಯಕರಾಗಿ ನನ್ನ ಪ್ರಾರ್ಥನೆಯಂತೆ ಮುನ್ನುಡಿಯನ್ನು ಬರೆದು ಕೊಟ್ಟ ಶ್ರೀಮಾನ್ ಸುಬೋಧ ರಾಮರಾಯರಿಗೆ ನನ್ನ ಅನಂತ ವಂದನೆಗಳು. ಈ ಪುಸ್ತಕ ಪ್ರಚಾರಕ್ಕೆ ನೆರವಾಗಿರುವ ಎಲ್ಲ ಮಹನೀಯರಿಗೂ ಶ್ರೀರಾಮನು ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಗಳನ್ನು ದಯಪಾಲಿಸಲೆಂದು ಸಹಾ ಶ್ರೀರಾಮಚಂದ್ರಮೂರ್ತಿಯನ್ನು ಪ್ರಾರ್ಥಿಸುವ,

ತಾ|| ೨೨-೧೧-೧೯೪೬<br>ಕನ್ನಡ ಸಾಹಿತ್ಯ ಸೇವಾಸದನ,<br>ಸಂತೆಕಲ್ಲುಹಳ್ಳಿ.

ಭಕ್ತಜನ ವಿಧೇಯ,<br>ಲಕ್ಷ್ಮೀನರಸಿಂಹ.

# ವಿಷಯಾನುಕ್ರಮಣಿಕೆ

# ಬಮ್ಮೆರ ಪೋತನ

---

ಶ್ರೀಮದ್ಭಾಗವತವು ಸಂಸ್ಕೃತದಲ್ಲಿದೆ. ಅದರಲ್ಲಿ ಅನೇಕ ನೀತಿಗಳಿವೆ. ನಮ್ಮ ಆರ್ಯರು ಲೋಕಸೇವೆಗಾಗಿ ಅನೇಕ ಸದ್ಗ್ರಂಥಗಳನ್ನು ಬರೆದು ಪವಿತ್ರರಾದರು. ಅಂತಹವರಲ್ಲಿ ವ್ಯಾಸ, ವಸಿಷ್ಠ, ವಾಲ್ಮೀಕಿ ಮೊದಲಾದವರು ಈಗಲೂ ಜನರ ನೆನಪಿನಲ್ಲಿದ್ದಾರೆ. ವಾಲ್ಮೀಕಿಯು ತನ್ನ ಕಾವ್ಯ ಪ್ರಭಾವದಿಂದ ಕವಿತಾತನಾದನು. "ವ್ಯಾಸೋ ನಾರಾಯಣೋಹರಿಃ" ಎಂಬ ಹೆಸರು ಬಂದುದು ಆತನ ಕಾವ್ಯಗಳಿಂದಲೇ! ಹೀಗೆ ಸದ್ಗ್ರಂಥಗಳನ್ನು ಬರೆಯುತ್ತಿದ್ದವರು ಸ್ವಾರ್ಥಿಗಳಾಗಿರಲಿಲ್ಲ, ಲೋಕಹಿತಾಕಾಂಕ್ಷಿಗಳಾಗಿರುತ್ತಿದ್ದರು. ಅವರಿಗೆ ಅಶನವಸನಗಳ ತಾಪತ್ರಯವೇ ಇರಲಿಲ್ಲ. ಐಶ್ವರ್ಯವಂತರಾಗಿ ಪ್ರಾಸಾದಗಳಲ್ಲಿರಬೇಕೆಂದು ಉದ್ದಿಶ್ಯವನ್ನೇ ಮಾಡುತ್ತಿರಲಿಲ್ಲ. ಮುರುಕಲು ಗುಡಸಲಿನಲ್ಲಿ ವಾಸ! ಕಂದಮೂಲಗಳ ಆಹಾರ! ಇವರ ಕೆಲಸಗಳು ಲೋಕಪಾವನವಾದುವು. ಕೀರ್ತಿಯು ಆಚಂದ್ರಾರ್ಕವಾದುದು. ಈ ಮಹನೀಯರ ಗ್ರಂಥಗಳನ್ನು ಅನೇಕರು ಅನೇಕ ಭಾಷೆಗಳಿಗೆ ಪರಿವರ್ತಿಸಿದ್ದಾರೆ. ಅವರೂ ಕೇವಲ ವೈರಾಗ್ಯನಿಧಿಗಳೆಂದೇ ನಮ್ಮ ಭರತಖಂಡದಲ್ಲಿ ಹೆಸರುಗೊಂಡಿದ್ದಾರೆ. ಮತ್ತು ಸ್ತೋತ್ರಾರ್ಹರಾಗಿದ್ದಾರೆ. ಇವರ ಪಾವನಕರಗಳಾದ ಚರಿತ್ರೆಗಳನ್ನು ನಾವು ಆಗಾಗ ಶ್ರವಣ ಮಾಡುತ್ತಿರುವುದರಿಂದ ನಮ್ಮಲ್ಲಿರುವ ಅನೇಕ ದುರ್ಗುಣಗಳು ಮಾಯವಾಗುವುವು. ಸ್ವಾರ್ಥತ್ಯಾಗಿಗಳಾದ ಅವರ ಇಷ್ಟಾರ್ಥಗಳು ಸ್ಮರಿಸಿದಾಗಲೇ ನಡೆಯುತ್ತಿದ್ದುದು ನಮಗೆ ಕನ್ನಡಿಯ ಬಿಂಬದಂತೆ ಕಾಣುತ್ತಿರುವಾಗ ನಾವೇಕೆ ಸ್ವಾರ್ಥಿಗಳಾಗಬೇಕು? ಎಂಬ ಭಾವನೆಯು ನಮ್ಮಲ್ಲಿ ಬೇರೂರುವುದು. ಹೀಗೆ ಸತ್ಕಾವ್ಯವನ್ನು ಬರೆದು ಲೋಕಹಿತವನ್ನೇ ತನ್ನ ಹಿತವೆಂದೂ ಲೋಕಸೇವೆಯೇ ಶ್ರೀರಾಮಚಂದ್ರನ ಸೇವೆಯೆಂದೂ ಕೆಲಸ ಮಾಡಿದಾತನು, "**ಪೋತನ**". ಈತನ ಕವಿತಾಪಾಕವು ಎಲ್ಲರನ್ನೂ ಮರುಳು ಮಾಡುವಂತಹುದು. ಪದಗುಂಭನ ಅರ್ಥಕಲ್ಪನೆ ಭಾವಗಳು ಪಂಡಿತರ ತಲೆಯನ್ನು ತೂಗಿಸುತ್ತವೆ. ಈತನ ಚರಿತ್ರೆಯೂ ಹಾಗೆಯೇ ಆಶ್ಚರ್ಯವಾಗಿದೆ.

## ಪೋತನನ ಬಾಲ್ಯ

ಪೋತನ ನಿಯೋಗಿ ಬ್ರಾಹ್ಮಣ. 'ಬಮ್ಮೆರ' ಎಂಬುದು ಈತನ ಮನೆತನದ ಹೆಸರು. ರಾಚಕೊಂಡ ರಾಜ್ಯದ ಸರ್ವಜ್ಞಸಿಂಗ ಭೂಪಾಲನ ಆಳ್ವಿಕೆಯಲ್ಲಿ, **ಏಕಶಿಲಾಸಗರ***ದಲ್ಲಿದ್ದವನು; ಅಂದರೆ ವಿಜಯನಗರದ ಪ್ರೌಢ ದೇವರಾಯರ ಕಾಲದವನೆಂದು ಹೇಳುತ್ತಾರೆ. ತಂದೆಯ ಹೆಸರು ಕೇಸನ ಮಂತ್ರಿ. ತಾಯಿ ಲಕ್ಕಾಂಬಿ ಕೇಸನ ಮಂತ್ರಿಗೆ ತಿಪ್ಪರಾಜು, ಪೋತರಾಜು ಎಂಬ ಇಬ್ಬರು ಮಕ್ಕಳಿದ್ದಂತೆ ತಿಳಿದು ಬರುತ್ತದೆ. ಅಷ್ಟೇನೂ ಐಶ್ವರ್ಯವಂತನಲ್ಲ. ಪೋತನ ಬಾಲ್ಯದಲ್ಲಿ ದನಗಳನ್ನು ಮೇಯಿಸುತ್ತಿದ್ದನು. ವಿದ್ಯೆಯಲ್ಲಿ ಪಾಂಡಿತ್ಯವುಳ್ಳವನಾಗಿರಲಿಲ್ಲ. ಬೆಳಗಾದರೆ ತನ್ನ ದನಗಳನ್ನು ಏಕಶಿಲಾ ನಗರದ ಬೆಟ್ಟಕ್ಕೆ ಹೊಡೆದುಕೊಂಡು ಹೋಗಿ ಸಾಯಂಕಾಲದ ವರೆವಿಗೂ ಅವುಗಳನ್ನು ಎಚ್ಚರದಿಂದ ಮೇಯಿಸುತ್ತಾ ಸಾಯಂಕಾಲಕ್ಕೆ ಮನೆಗೆ ಬರುವನು. ಮನೆಗೆ ಬಂದಮೇಲೆ ಕೈಕಾಲುಗಳನ್ನು ತೊಳೆದುಕೊಂಡು ತಂದೆಯವರು ಹೇಳಿಕೊಡುವ ಕೆಲವು ಪದ್ಯಗಳನ್ನು ಹೇಳಿಕೊಳ್ಳುವನು. ಈ ಸಾಂಪ್ರದಾಯವು ನಮ್ಮಲ್ಲಿ ಕೆಲವು ದಿನಗಳವರೆವಿಗೂ ಇದ್ದಿತು. ತನ್ನ ಕರ್ತವ್ಯದಲ್ಲಿ ತುಂಬಾ ನಿಷ್ಠನಾಗಿದ್ದನು. ಹದಿನಾರು ವರ್ಷ ವಯಸ್ಸಾಗುವವರೆಗೂ ಈತನ ಕಾರ್ಯಗಳು ದನ ಕಾಯುವುದರಲ್ಲಿದ್ದಿತೇ ಹೊರತು ಇತರ ಚಿಂತೆಯೇ ಇರಲಿಲ್ಲ.

ಕವಿತ್ವವು ತಾನಾಗಿ ಬರುವುದು ಲೋಕದ ಸ್ವಭಾವ. ಇದು ಕಲಿತು ಬರುವ ವಿದ್ಯೆಯಲ್ಲ. "ನಾಋಷಿಃ ಕುರುತೇ ಕಾವ್ಯಂ" ಎಂಬ ವಾಕ್ಯವು ಇದನ್ನು ದೃಢ ಮಾಡುತ್ತದೆ. ಋಷಿಯ ಅಂಶವಿರುವಾತನು ಮಾತ್ರ ಗ್ರಂಥಗಳನ್ನು ಬರೆಯುತ್ತಾನೆ. ಪೋತನನಿಗೆ ಈ ಅಂಶವಿದ್ದಿತೆಂದೇ ಹೇಳಬಹುದು. ತಾನು ದನಗಳನ್ನು ಮೇಯಿಸುತ್ತಾ ತಂದೆಯು ಹೇಳಿಕೊಟ್ಟ ಪದ್ಯಗಳನ್ನು ಆಗಾಗ ಬಾಯಲ್ಲಿ ಹೇಳಿಕೊಳ್ಳುತ್ತಿದ್ದನು. ಅದರಲ್ಲಿಯೂ ಬೆಟ್ಟದ ದೊಡ್ಡ ದೊಡ್ಡ ಕಲ್ಲುಗಳ ಮೇಲೆ ಕುಳಿತು ಆನಂದದಿಂದ ರಾಗವನ್ನು ತೆಗೆಯುತ್ತಿದ್ದನು. ಈತನು ಹಾಡುತ್ತಿದ್ದರೆ ಹಸುಗಳೆಲ್ಲಾ ಒಂದು ವಿಧವಾದ ಆನಂದದಿಂದ ಇರುತ್ತಿದ್ದುವು. ಜತೆಯ ಹುಡುಗರಂತೂ ಇಂಪಾದ ಈತನ ಸಂಗೀತವನ್ನು ಕೇಳಿ ಈತನು ಹೇಳಿದ ಕೆಲಸಗಳನ್ನೆಲ್ಲಾ ಮಾಡಿಕೊಡುತ್ತಿದ್ದರು. ಹೀಗಾಗಿ ಪೋತನನು ದನ ಕಾಯುವವರ ದಣಿಯಂತೆ ಶೋಭಾಯಮಾನನಾಗಿದ್ದನು. ವಿಶಾಲವಾದ ಹಣೆ! ಭಕ್ತಿ ಮಾರ್ಗವನ್ನು ಇತರರಿಗೆ ಬೋಧಿಸುವ ಶಾಂತಮಯವಾದ ಹಸನ್ಮುಖ! ಮುತ್ತುಗಳ ಸಾಲಿನಂತೆ ಹೊಳೆಯುವ ಹಲ್ಲುಗಳು! ಲೋಕವನ್ನು ಮರುಳು ಮಾಡುವ ಧ್ವನಿ! ಶೃಂಗಾರವಾದ ಕೂದಲು! ಇವು ಯಾರನ್ನು ತಾನೇ ಆಕರ್ಷಿಸದಿರುವುದು? ಇಂತಹ ಸುಕುಮಾರನು ದನಗಳನ್ನು ಮೇಯಿಸುವ ರೀತಿಯೇ

---

*ಇದನ್ನು ಒಂಟಿಮಿಟ್ಟೆ ಎಂದು ಕೆಲವರೂ ಓರುಗಲ್ ಎಂದು ಕೆಲವರೂ ಹೇಳುತ್ತಾರೆ. ಕಾಳಿದಾಸನು ಮಾಡಿರುವ ವರ್ಣನೆಯಿಂದ ಏಕಶಿಲಾನಗರವೇ ಬೇರೆಯೆಂದಾಗುತ್ತದೆ.

ಒಂದು ವಿಧವಾಗಿದ್ದಿತು. ತಾನು ಒಂದು ದಿನ ಬೆಟ್ಟದ ಒಂದು ಕಲ್ಲಿನಮೇಲೆ ಕುಳಿತು ಹೀಗೆ ಯೋಚನೆ ಮಾಡಿದನು.

"ನಾನು ಇನ್ನು ಮುಂದೆ ಕೆಲವು ಪದ್ಯಗಳನ್ನು ಸ್ವಂತವಾಗಿ ಹೇಳಬೇಕು. ಅವುಗಳಲ್ಲಿ ವಿಶೇಷಾರ್ಥಗಳಿರಬೇಕು. ಈಗ ನಮ್ಮ ತಂದೆಯವರು ಹೇಳಿಕೊಡುವ ಪದ್ಯಗಳಿಗಿಂತ ಅವು ಚನ್ನಾಗಿರಬೇಕು. ಲೋಕವೆಲ್ಲಾ ಮೆಚ್ಚುವಂತಿರಬೇಕು. ಎಷ್ಟೇ ಐಶ್ವರ್ಯವನ್ನು ಸಂಪಾದಿಸಲಿ ಅದು ಶಾಶ್ವತವಾಗಿರುವುದಿಲ್ಲ. ಲೋಕಹಿತವೂ ಅಲ್ಲ. ಪದ್ಯಗಳನ್ನು ಒಂದು ಕಡೆ ಬರೆದಿಟ್ಟದ್ದರೆ ಅನೇಕರು ಓದುವರು. ಆಗ ನನಗೆ ಹೆಸರು ಬರುವುದಿಲ್ಲವೆ? ದೇಶದಲ್ಲೆಲ್ಲಾ ಪೋತನ ಎಂಬ ಹೆಸರು ಶಾಶ್ವತವಾಗಬೇಕಾದರೆ ಪದ್ಯಗಳಿಂದಲೇ! ಹೀಗೆಯೇ ದನಗಳನ್ನು ಮೇಯಿಸುತ್ತಿದ್ದರೆ ನನ್ನ ಹೆಸರು ಇಲ್ಲಿಗೇ ಕಡೆಯಾಗುವುದು. ಲೋಕವೆಲ್ಲಾ ಹೀಗಿರುವುದೇನೋ ನಿಜ! ಅವರಿಗೆ ತಮ್ಮ ಹೆಸರನ್ನು ಶಾಶ್ವತಗೊಳಿಸಬೇಕೆಂಬ ಬಯಕೆ ಸ್ವಲ್ಪವಾದರೂ ಇಲ್ಲ. ಶರೀರ ಸುಖಕ್ಕಾಗಿ ಕಿತ್ತಾಡುವರು. ಶರೀರವೇ ಶಾಶ್ವತವಾಗಿರುವುದಿಲ್ಲ. ಇನ್ನು ಅದಕ್ಕಾಗಿ ಮಾಡುವ ಉಪಚಾರ ಕಾರ್ಯಗಳು ಶಾಶ್ವತವೆ? ಈಗ ನಮ್ಮ ತಂದೆಯವರು ಹೇಳಿಕೊಡುತ್ತಿರುವ ಪದ್ಯಗಳು ಯಾವ ಮಹನೀಯರು ಬರೆದರೋ! ನಾವೆಲ್ಲರೂ ಹೇಳಿಕೊಳ್ಳುತ್ತಿಲ್ಲವೆ? ಇವಕ್ಕಾಗಿ ನನಗೊಬ್ಬ ಗುರುವು ಬೇಕಲ್ಲವೆ? ಯಾರನ್ನು ಹುಡುಕಿಕೊಂಡು ಹೋಗಲಿ? ನನ್ನ ಉದ್ದಿಶ್ಯವನ್ನು ಕೇಳಿದವರು ಅಪಹಾಸ್ಯ ಮಾಡದೆ ಇರುವುದಿಲ್ಲ. ನಿಜವಾಗಿಯೂ ಇದು ಲೋಕಕ್ಕೆ ಹೇಳನ. ಕೆಲವರಿಗೆ ಆನಂದ! ಆನಂದಕ್ಕಿಂತಲೂ ಅತಿಶಯವಾದುದು ಯಾವುದು? ವಾಲ್ಮೀಕಿಯ ರಾಮಾಯಣವನ್ನು ಓದುತ್ತಿದ್ದರೆ ಶರೀರವೇ ಮರೆತುಹೋಗುವುದು. ವ್ಯಾಸ ಭಾರತವು ರೋಮಾಂಚನನ್ನುಂಟುಮಾಡುವುದು. ಇವುಗಳಲ್ಲಿಲ್ಲದ ನೀತಿಯೂ ಇದೆಯೆ? ಲೋಕದಲ್ಲಿ ಮನುಷ್ಯನಾಗಿ ಹುಟ್ಟುವುದು ಇಂತಹ ಸದ್ಗ್ರಂಥಗಳ ಸಾರವನ್ನು ಹೀರಿ ಅದರಂತೆ ನಡೆಯುವುದಕ್ಕಾಗಿಯೇ! ಬರಿಯ ಓದುಗಾರಿಕೆಯಿಂದ ಪ್ರಯೋಜನವೇನು? ಓದಿದ ಭಾಗವನ್ನು ಗ್ರಹಿಸಿ ಅದರಂತೆ ನಡೆಯತಕ್ಕವನೀಗ ಮನುಷ್ಯ. ಹಾಗಿಲ್ಲದವನು ಮೃಗಗಳ ಜಾತಿಗೆ ಸೇರಬೇಕಾದ್ದೇ! ಮೃಗಗಳಿಗೂ ಮನುಷ್ಯರಿಗೂ ವ್ಯತ್ಯಾಸವೇನು? ಅವೂ ನಮ್ಮಂತೆಯೇ ಊಟ ಮಾಡುತ್ತವೆ. ನಿದ್ದೆ ಹೋಗುತ್ತವೆ. ತಿಳಿವಳಿಕೆಯೊಂದರಲ್ಲಿ ಅವಕ್ಕೂ ನಮಗೂ ವ್ಯತ್ಯಾಸ! ಆ ತಿಳಿವಳಿಕೆಯನ್ನು ಅಶಾಶ್ವತವಾದ ಕಾರ್ಯಗಳ ಮೇಲೆ ಬಿಡುವುದು ಮನುಷ್ಯ ಧರ್ಮವಾಗಬಾರದು, ನನಗೀಗ ಪ್ರಾಪ್ತ ವಯಸ್ಸಾಗಿದೆ. ಇಂದಿನಿಂದ ಪ್ರಾರಂಭಿಸಿ ಒಂದು ಗ್ರಂಥವನ್ನು ಬರೆಯುವೆನು."

ಹೀಗೆ ನಿರ್ಧರಿಸುತ್ತಲೇ ಈತನ ಹೃದಯವು ಪರಿವರ್ತನೆಯಾಯಿತು. ವಿರಾಮ ಕಾಲದಲ್ಲಿ ಭೋಗಿನೀ ದಂಡಕವೆಂಬ ಗ್ರಂಥವನ್ನು ಬರೆದನು. ತಂದೆತಾಯಿಗಳ ಆಜ್ಞೆಯನ್ನು ಎಳ್ಳಷ್ಟೂ ಮೀರದಿರುವ ಅಭ್ಯಾಸವು ಬಾಲ್ಯದಿಂದಲೂ ಇದ್ದಿತಾದರೂ ಐಹಿಕ

ಸುಖದ ಕಾರ್ಯಗಳಲ್ಲಿ ಸ್ವಲ್ಪ ಬೇಸರವೇ ಆಯಿತು. ದೇವರ ಪೂಜೆಯಲ್ಲಿ ಆಸಕ್ತಿಯು ಹೆಚ್ಚಿತು. ಆ ಊರಿನಲ್ಲಿದ್ದ ಕೋದಂಡರಾಮಸ್ವಾಮಿಯ ಗುಡಿಗೆ ಸಾಯಂಕಾಲವಾಗುತ್ತಲೇ ಬಂದುಬಿಡುವನು. ಭಜನೆಯ ಕೀರ್ತನೆಗಳನ್ನು ಹಾಡುವುದು ಈತನ ನಿಯಮಿತ ಕಾರ್ಯವಾಯಿತು. ಸಂಗೀತ ಪಾಠವಿಲ್ಲದಿದ್ದರೂ ಕೋಗಿಲೆಯನ್ನು ಮೀರಿಸುವ ಕಂಠಸ್ವರವಿದ್ದುದರಿಂದ ಅನೇಕರು ಸೇರುತ್ತಾ ಬಂದರು. ತನ್ನ ಉದ್ದಿಶ್ಯಗಳನ್ನು ಆಗಾಗ ಜನರಲ್ಲಿ ಹೇಳುವುದಕ್ಕೆ ಪ್ರಾರಂಭಿಸಿದನು. ಇದು ಹರಿಕಥೆಯ ರೂಪವಾಯಿತು. ಈ ಕಥೆಯು ಜನಾದರಣೀಯವಾಗಿ ಊರಿನವರೆಲ್ಲಾ ಎಷ್ಟೇ ಕೆಲಸಗಳಿರಲಿ ಸಾಯಂಕಾಲಕ್ಕೆ ಕೋದಂಡರಾಮಸ್ವಾಮಿಯ ಗುಡಿಯನ್ನು ಸೇರಿಬಿಡುತ್ತಿದ್ದರು. ಪರಸ್ಥಳದ ಕೆಲಸವು ಬಿದ್ದರೆ, ಅಲ್ಲಿ ಏಕ ಶಿಲಾನಗರದವರಿಗೆ ಒಂದು ರಾತ್ರಿ ಕಳೆಯುವುದೇ ದುಸ್ತರವಾಗಿಬಿಡುತ್ತಿದ್ದಿತು. ಹೀಗಾಗಿ ಪೋತನನ ಖ್ಯಾತಿಯು ಸುತ್ತುಮುತ್ತಲೂ ಹರಡಿ ಅನೇಕರು ಈತನ ಪುರಾಣವನ್ನು ಕೇಳಲು ಬರಲಾರಂಭಿಸಿದರು.

ಶ್ರೀಮದ್ರಾಮಾಯಣದ ವ್ಯಾಖ್ಯಾನವು ಒಂದು ಭಾಗವಾಗಿ ಪುರಾಣಕ್ಕೆ ಮೊದಲಾಯಿತು. ಈ ಗ್ರಂಥದಲ್ಲಿ ಪೋತನನಿಗೆ ತುಂಬಾ ಆಶೆ. ಒಂದೊಂದು ಶ್ಲೋಕವನ್ನು ಹೇಳಿದರೆ ಅದರಲ್ಲಿರುವ ಭಾವ ತಾತ್ಪರ್ಯಗಳನ್ನು ಬಿಚ್ಚಿದಲ್ಲದೆ ಸುಮ್ಮನಾಗುತ್ತಿರಲಿಲ್ಲ. ಇದು ವಾಗ್ವೈಖರಿಯಲ್ಲ. ಭಕ್ತಿರಸದ ಪ್ರಭಾವ! ತಾನೇ ರಾಮನಾದಂತೆ ಮಾತನಾಡುವನು. ದಶರಥನಂತೆ ವ್ಯಥೆ ಪಡುವನು. ಕೌಸಲ್ಯೆಯಂತೆ ಅಳುವನು. ಕೈಕೆಯಂತೆ ಒರಟುತನವನ್ನು ಮಾಡುವನು. ಒಂದು ದಿನ ಈತನು 'ರಾಮಂ ದಶರಥಂ ವಿದ್ಧಿ ಮಾಂವಿದ್ಧಿ ಜನಕಾತ್ಮಜಾಂ ಅಯೋಧ್ಯಾಮಟವೀಂ ವಿದ್ಧಿ ಗಚ್ಛತಾತ ಯಥಾ ಸುಖಂ' ಎಂದು ಹೇಳಿ ಗದ್ಗದಿತಕಂಠನಾದನು. ಮುಂದಿನ ವಾಖ್ಯಾನವೇ ಈತನ ಬಾಯಿಂದ ಹೊರಡದಂತಾಯಿತು. ಕೇಳುವ ಜನರಿಗೆ ಇದರ ಭಾವವು ಗೊತ್ತಿಲ್ಲದಿದ್ದರೂ ಅಲ್ಲೇನೋ ವ್ಯಸನವಿರುವುದೆಂದು ತಾವೂ ಅತ್ತರು! ಮುಹೂರ್ತ ಮಾತ್ರ ನಿಶ್ಶಬ್ದವಾಗಿಹೋಯಿತು. ಅಷ್ಟರಲ್ಲಿಯೇ ಪೋತನನು ಮಾತುಗಳನ್ನು ಆರಂಭಿಸುತ್ತಾ 'ಅಯ್ಯೋ! ಲಕ್ಷ್ಮಣಾ! ಇನ್ನು ನಿನ್ನನ್ನು ಕೇಳುವವರು ಯಾರು? ರಾಮನು ಅರಣ್ಯಕ್ಕೆ ಹೋಗುವುದು ಎಲ್ಲರಿಗೂ ವ್ಯಥೆ ಸೀತೆಯು ಅರಮನೆಯನ್ನು ಬಿಡಲೇ ಕೂಡದು. ನೀನು ಮಾತ್ರ "ಗಚ್ಛತಾತಯಥಾ ಸುಖಂ" ಎಷ್ಟು ಚನ್ನಾಗಿದೆಯಪ್ಪಾ? ತಂದೇ! ನೀನೊಬ್ಬನೇ ಲೋಕಪೂಜ್ಯನು ನಿನ್ನ ದೃಢವೂ ಅಂತಹುದೇ!' ಅನ್ನುತ್ತಾ ಕಣ್ಣೀರು ಸುರಿಸಿದನು. ವ್ಯಾಖ್ಯಾನಕ್ಕೆ ಆರಂಭವಾಯಿತು. ಜನರಿಗೆ ಈತನ ವ್ಯಾಖ್ಯಾನದಲ್ಲಿ ಆದರವು ಹೆಚ್ಚುತ್ತಾ ಬಂದಿತು. ರಾಮಾಯಣವನ್ನು ಎರಡು ವರ್ಷಗಳ ಕಾಲ ಪುರಾಣ ಹೇಳಿದ ಧೀರ! ಪ್ರತಿಫಲಾಪೇಕ್ಷೆಯಿಲ್ಲ. ಹಾಗಿದ್ದಿದ್ದರೆ ಆತನಿಗೆ ಹಣದ ಮಳೆಯೇ ಸುರಿಯುತ್ತಿದ್ದಿತೋ ಏನೋ! ಹೀಗಾಗಿ ಹದಿನಂಟು ವಯಸ್ಸಾಗುವುದರಲ್ಲಿ ಪೋತನನು ವೈರಾಗ್ಯದ ದಾರಿಯನ್ನು ಹಿಡಿದನು. ಈತನ ಕರ್ತವ್ಯಗಳೇ ಬೇರೆ ವಿಧವಾಗಿದ್ದುವು.

## ಪೋತನನ ಲಗ್ನ

ಪೋತನನಿಗೆ ಬಾಲ್ಯದಲ್ಲಿಯೇ ವೈರಾಗ್ಯವು ಹುಟ್ಟಿತೆಂದು ಜನರು ಅಂದು ಕೊಳ್ಳಲು ಮೊದಲು ಮಾಡಿದರು. ಈತನ ಉಪದೇಶವನ್ನು ಕೇಳಿ ಪಾರೂ ಹಾಗೆಯೇ ಆಗುತ್ತಾ ಬಂದರು. ತನ್ನ ವೃತ್ತಿಯಲ್ಲಿ ಪೋತನ ಸ್ವಲ್ಪವಾದರೂ ಉದಾಸೀನವನ್ನು ತೋರಿಸುತ್ತಿರಲಿಲ್ಲ. ಮಗನ ಚರ್ಯೆಗಳನ್ನು ಕಂಡು ಕೇಳಿ ಕೇಸನ ಮಂತ್ರಿಗೆ ಆಶ್ಚರ್ಯವೂ ವ್ಯಸನವೂ ಉಂಟಾಯಿತು. ಆತನು ಮಗನ ಲಗ್ನವನ್ನು ಕಣ್ಣಾರೆ ನೋಡ ಬೇಕೆಂಬ ಕುತೂಹಲವುಳ್ಳವನಾಗಿದ್ದನು. ಸಂಸಾರವು ಅಸಾರವೆಂದು ಬೋಧಿಸು ತ್ತಿರುವನು ಲಗ್ನಕ್ಕೆ ಒಪ್ಪುವನೆ? ಪಿತೃವಾಕ್ಯ ಪರಿಪಾಲನೆಯು ಲೋಕಧರ್ಮವೆಂದು ಹೇಳುತ್ತಿರುವಾತನು ತನ್ನ ಮಾತನ್ನು ಮೀರುವನೆ? ಯಾವುದನ್ನೂ ಪ್ರಯತ್ನಿಸಿ ನೋಡಬೇಕೆಂದು ಯಾರ ಸಹಾಯವನ್ನೂ ಅಪೇಕ್ಷಿಸದೆ ಇದ್ದನು. ಮಗನು ಮಾಡು ತ್ತಿರುವ ಲೋಕಸೇವೆಯಲ್ಲಿ ಕೇಸನ ಮಂತ್ರಿಗೆ ಸ್ವಲ್ಪವಾದರೂ ಅಸಮಾಧಾನವಿರಲಿಲ್ಲ. ಇಂತಹ ಸದ್ಬೋಧೆಯಿಂದ ಲೋಕವು ಒಳ್ಳೆಯ ದಾರಿಗೆ ಬರುವುದೆಂದು ಆತನಿಗೆ ಚನ್ನಾಗಿ ಗೊತ್ತು. ಜನರಲ್ಲಿ ಐಕಮತ್ಯವು ಬೇರೂರಲು ಭಗವದ್ಭಕ್ತಿಗಿಂತ ತಳ ಹದಿಯೇ ಇಲ್ಲವೆಂದು ತಾನೇ ಅನೇಕ ಸಲ ಹೇಳಿದ್ದನು. ಮಗನ ನಡವಳಿಕೆ ವಿಚಾರದಲ್ಲಿ ಸ್ವಲ್ಪವೂ ಅನುಮಾನವಿರಲಿಲ್ಲ. ಸಂಪಾದನೆಯನ್ನು ಮಾಡಲಿಲ್ಲವೆಂಬ ಕ್ರೋಧವೂ ಇಲ್ಲ. ತನ್ನ ಕರ್ತವ್ಯದಲ್ಲಿ ನಿಷ್ಠನಾಗಿದ್ದುದರಿಂದ ವಿರಾಮ ಕಾಲದಲ್ಲಿ ಮಾಡುವ ಲೋಕಸೇವೆಯು ಕೇಸನ ಮಂತ್ರಿಯ ಕೋಪಕ್ಕೇ ಅವಕಾಶವನ್ನು ಕೊಡಲಿಲ್ಲ. ಹೀಗಾಗಿ ಒಂದು ರಾತ್ರಿ ಮಗನು ಗುಡಿಗೆ ಹೋಗಿ ಬರುವವರೆಗೂ ಎಚ್ಚರದಿಂದಿದ್ದನು. ಅಂದು ಸೀತೆ ರಾವಣರ ಸಂವಾದವು ಕಥಾಭಾಗವಾಗಿದ್ದಿತು. ಸೀತೆಯು ರಾವಣನಿಗೆ ತಿಳಿಸಿದ ಶ್ರೀರಾಮರ ಮಹಿಮೆಯನ್ನು ವರ್ಣಿಸುವ ವೇಳೆಗೆ ಅರ್ಧ ರಾತ್ರಿಯು ಮೀರಿತು. ಮನೆಗೆ ಬಂದು ನೋಡಿದನು. ಎಲ್ಲರೂ ನಿದ್ರಾಭರ ದಲ್ಲಿದ್ದರು. ತಂದೆಯವರು ಮಾತ್ರ ಮನೆಯ ಮುಂಭಾಗದ ಪಡಸಾಲೆಯಲ್ಲಿ ಮಲ ಗಿದ್ದರು. ಕತ್ತಲಾಗಿದ್ದುದರಿಂದ ಅವರನ್ನು ನೋಡಲಿಲ್ಲ. ಮನೆಯವರನ್ನು ಎಬ್ಬಿಸಲು ಇಷ್ಟವಿಲ್ಲ ಅದರಿಂದ ತಾನೂ ಪಡಸಾಲೆಯಲ್ಲಿಯೇ ಮಲಗಿಬಿಡೋಣವೆಂದು ನಿರ್ಧರಿಸಿ ಮೇಲಿದ್ದ ಉತ್ತರೀಯದಿಂದ ಕಸವನ್ನು ತಳ್ಳುತ್ತಾ ಬಂದನು. ಇದನ್ನು ನೋಡಿದ ಕೇಸನ ಮಂತ್ರಿಯು ಆಶ್ಚರ್ಯಚಕಿತನಾಗಿ "ಮಗೂ ಪುರಾಣವು ಮುಗಿಯಿತೆ?"

"ಅಪ್ಪಾ ಕ್ಷಮಿಸಬೇಕು ತಮ್ಮನ್ನು ನೋಡಲೇ ಇಲ್ಲ, ಮನೆಯಲ್ಲಿ ಮಲಗಿರ ಬೇಕೆಂದು ಅಂದುಕೊಂಡೆ"

"ಚಿಂತೆಯಿಲ್ಲ. ಬಾ ಕುಳಿತುಕೋ ನೀನು ಬಹಳ ಆಯಾಸಪಟ್ಟಿರಬಹು ದಲ್ಲವೆ?"

"ಆಯಾಸವೆಂದರೇನು? ನಾನು ಇನ್ನೂ ಹುಡುಗ. ಧರ್ಮವಿರುದ್ಧವಾಗಿ ನಡೆಯಲಾಗುವುದೆ? ತಮಗಾಗಿ ಯಾವ ಕೆಲಸವನ್ನಾದರೂ ಮಾಡಲು ಸಿದ್ಧನಾಗಿರುವೆನು."

"ಅಂತಹ ಕೆಲಸವೇನೂ ಇಲ್ಲ. ನೀನು ಈಗ ಹೇಳುತ್ತಿರುವ ಪುರಾಣವು ಇನ್ನೂ ಎಷ್ಟು ಕಾಲ ಹಿಡಿಯುವುದು?"

"ಇದರಿಂದ ತಮ್ಮ ಕೆಲಸಗಳಿಗೇನೂ ತೊಂದರೆಯಿಲ್ಲವಷ್ಟೆ!"

"ಇಲ್ಲ ಇಲ್ಲ. ಅಂತಹ ವಿಚಾರವೇ ಇಲ್ಲ. ಶ್ರೀಮದ್ರಾಮಾಯಣದ ಯಾವ ಭಾಗವನ್ನು ಹೇಳುತ್ತಿರುವೆ.?"

"ಸೀತಾ ರಾವಣರ ಸಂವಾದವನ್ನು ಹೇಳುತ್ತಿದ್ದೇನೆ"

"ಹಾಗಾದರೆ ಶ್ರೀಮದ್ರಾಮಾಯಣವು ಮುಗಿದಂತೆಯೇ! ಇನ್ನು ಯುದ್ಧ ಕಾಂಡವೇ ತಾನೇ"

"ಹಾಗೆ ಹೇಳುವುದಕ್ಕಾದೀತೆ? ಸುಂದರಕಾಂಡವೇ ಇನ್ನೂ ಒಂದೆರಡು ತಿಂಗಳ ಕಾಲ ಹಿಡಿಯುವುದು"

"ಒಂದೆರಡು ತಿಂಗಳ ವಿಷಯವೇನಿದೆ ಮಗೂ! ಚೂಡಾಮಣಿಯನ್ನು ತೆಗೆದು ಕೊಂಡು ಹೋಗಿ ಶ್ರೀರಾಮರಿಗೆ ಕೊಡುವುದು ತಾನೇ!"

"ಅಪ್ಪಾ! ಶ್ರೀರಾಮರ ವಿಚಾರವನ್ನೆಲ್ಲಾ ಮಹನೀಯರು ಒಂದೇ ಶ್ಲೋಕದಲ್ಲಿ ಹೇಳಿದ್ದಾರೆ. ಅದರಿಂದ ರಾಮಾಯಣದ ನೀತಿಗಳೆಲ್ಲಾ ತಿಳಿದಂತಾಯಿತೆ? ವಾಲ್ಮೀಕಿಯ ಶ್ರಮವು ಸಾರ್ಥಕವಾಯಿತೆ? ಅರ್ಥ ಸ್ವಾರಸ್ಯವನ್ನು ಗ್ರಹಿಸಿ ಲೋಕಕ್ಕೆ ಅದನ್ನು ಹೋಲಿಸಿ ನಮ್ಮಲ್ಲಿರುವ ದುರ್ಗುಣಗಳನ್ನು ದೂರ ಮಾಡಲು ರಾಮಾಯಣಕ್ಕಿಂತ ಒಳ್ಳೆಯ ಗ್ರಂಥವೇ ಇಲ್ಲವೆಂದು ನನ್ನ ಅಭಿಮತ. ಹಾಗೆ ತಿಳಿದುಕೊಳ್ಳಬೇಕಾದರೆ ವರ್ಷಗಳ ಗಟ್ಟಲೆ ಬೇಕಾಗುತ್ತದೆ. ಮನುಷ್ಯನು ತಿಳಿವಳಿಕೆ ಬಂದ ಮೊದಲು ದೇವರು ಕೊಟ್ಟ ಆಯುಷ್ಯದ ನೂರು ವರ್ಷಗಳೂ ಕೆಲಸ ಮಾಡಿದರೂ ಆ ಗ್ರಂಥದ ಅನುಭವವು ಪೂರ್ತಿಯಾಗದೆಂದೇ ನಾನು ನಂಬಿದ್ದೇನೆ. ಪ್ರಕೃತ ಅದು ಮುಗಿಯಲಿ, ಮುಗಿಯದಿರಲಿ ನನ್ನ ಲೋಕಸೇವೆಯನ್ನು ಈ ರೀತಿ ನಡೆಯಿಸಬೇಕೆಂದಿದ್ದೇನೆ. ಇದು ತಮ್ಮ ಇಷ್ಟಕ್ಕೆ ವಿರೋಧವಲ್ಲವಷ್ಟೆ?"

"ಒಂದು ವೇಳೆ ನನ್ನ ಇಷ್ಟಕ್ಕೆ ಇದೆಲ್ಲಾ ವಿರೋಧವಾದರೆ ತಾನೇ ಎಷ್ಟು ಜನರ ಮನಸ್ಸಿಗೆ ಅಸಮಾಧಾನವಾಗಬಹುದು ಅದನ್ನು ನೀನು ಸಮ್ಮತಿಸುವೆಯಾ? ನೀನು ಸಮ್ಮತಿಸಿದರೂ ಅನೇಕರಿಗೆ ನಮ್ಮಲ್ಲಿ ಒಂದು ವಿಧವಾದ ದುರಭಿಪ್ರಾಯವು ಹುಟ್ಟಿ ಇದುವರೆವಿಗೆ ನಿನ್ನಲ್ಲಿರುವ ವಿಶ್ವಾಸವು ದೂರವಾಗುವುದಿಲ್ಲವೆ? ನುಡಿದಂತೆ ನಡೆಯಬೇಕಾದುದು ಮನುಷ್ಯನ ಲಕ್ಷಣವಲ್ಲವೆ?"

"ಚನ್ನಾಗಿ ಅಪ್ಪಣೆ ಕೊಡಿಸಿದಿರಿ. 'ಸತ್ಯಂವದ; ಧರ್ಮಂಚರ' ಎಂದಲ್ಲವೇ ಆರ್ಯೋಕ್ತಿಯಿರುವುದು. ಅದರಂತೆ ನಡೆಯತಕ್ಕವರೇ ಮನುಷ್ಯರು. ಶ್ರೀರಾಮನು ಕಾಡಿಗೆ ಹೋಗುವುದು ಯಾರಿಗೆ ಸಮಾಧಾನವಾಗಿದ್ದಿತು? ಅಯೋಧ್ಯೆಯ ಜನಗಳು ಒಪ್ಪಿದರೆ? ಸುಮಂತ್ರಾದಿಗಳು ಸಮ್ಮತಿಸಿದರೆ? ವಸಿಷ್ಠರಿಗೆ ಆನಂದವಾಗಿದ್ದಿತೆ? ಅಷ್ಟೇಕೆ! ದಶರಥನಿಗೇ ಅದು ಇಷ್ಟವಾದ ವಿಚಾರವೆ? ಎಷ್ಟು ಜನರು ಅಸಮಾಧಾನ ಪಟ್ಟರೂ ಕೈಕೆಗೆ ತಂದೆಯು ಕೊಟ್ಟ ಮಾತನ್ನು ಪಾಲಿಸಬೇಕೆಂದಲ್ಲವೆ ಆತನು ಪ್ರಯಾಣವಾದುದು? ರಾಜ್ಯಪಟ್ಟವನ್ನು ಹೊಂದುವ ಭರತನೇ ಅರಣ್ಯಕ್ಕೆ ಹೋಗಿ ಕಣ್ಣೀರಿಡಲಿಲ್ಲವೆ? ಅದಕ್ಕೆ ರಾಮನು ಮರುಳಾಗಿ ಹಿಂದಿರುಗಿದನೆ? ತಮಸಾತೀರದ ವರೆಗೂ ಪಟ್ಟಣವ ಜನಗಳೆಲ್ಲಾ ರಾಮನನ್ನೇ ಹಿಂಬಾಲಿಸಿದಾಗ ಅವರೆಲ್ಲರೂ ನಿದ್ರೆ ಮಾಡುತ್ತಿದ್ದ ಸಮಯದಲ್ಲಿ ಹೊರಟುಹೋಗಲಿಲ್ಲವೆ? ಜಾಬಾಲಿಯು ತಂದೆಗೂ ಮಗನಿಗೂ ಸಂಬಂಧವೇನೆಂದು ಎಷ್ಟು ವೇದಾಂತವನ್ನು ಹೇಳಿದನು? ಅದಕ್ಕೆ ರಾಮನು ಸಮ್ಮತಿಸಿದನೆ? ಇದರಿಂದ ನಮಗೆ ಲೋಕಹಿತಕ್ಕಿಂತಲೂ ತಂದೆತಾಯಿಗಳ ಮಾತೇ ಹೆಚ್ಚೆಂದು ತಿಳಿಯುವುದಿಲ್ಲವೆ? ಶ್ರೀರಾಮನು ಲೋಕಹಿತಕ್ಕಾಗಿ ಅವತಾರ ಮಾಡಿ ತನ್ನ ನಡೆನುಡಿಗಳಿಂದ ಆದರ್ಶನಾಗಿದ್ದಾನೆ. ಪ್ರತಿಯೊಬ್ಬನೂ ರಾಮನಂತೆ ನಡೆಯುವ ರಾಜ್ಯವೇ ರಾಮರಾಜ್ಯ. ಬಾಯಲ್ಲಿ ಹೇಳುವ ಮಾತುಗಳಿಂದ ಪ್ರಯೋಜನ ವೇನು? ಅದು ಕಳ್ಳರ ಲಕ್ಷಣ. ಕಳ್ಳತನವನ್ನು ಮಾಡುವವನು ಶಿಕ್ಷಾರ್ಹನು. ಯಾರೇ ಆಗಲಿ ಆತ್ಮಸಾಕ್ಷಿಗೆ ವಿರೋಧವಾಗಿ ನಡೆಯಬಾರದು. ಆತ್ಮಸಾಕ್ಷಿಯೇ ಆನಂದ. ಅದರಲ್ಲಿ ಲೀನನಾಗಿರುವಾತನೇ ರಾಮನು"

"ಅಪ್ಪಾ ಪೋತನಾ! ನಿನ್ನ ಮಾತುಗಳು ವಯೋವೃದ್ಧರನ್ನೂ ಮರುಳು ಮಾಡುತ್ತಿರುವುವು. ನೀನು ಜ್ಞಾನನಿಧಿ. ನನಗೊಂದು ಯೋಚನೆಯು ಶರೀರವನ್ನು ಕೊರೆಯುತ್ತಿರುವುದು ಅದನ್ನು ನೀನೇ ಪರಿಹರಿಸಬೇಕು."

"ಅಗತ್ಯವಾಗಿ ಆಗಲಿ ತಮ್ಮ ಕೊರತೆಯನ್ನು ಪರಿಹರಿಸುವ ಭಾರವು ಇತರರಿಗೇಕೆ?"

"ಮತ್ತೇನೂ ಇಲ್ಲ. ವಂಶಾಭಿವೃದ್ಧಿಯು ಪಿತೃಪ್ರೀತಿಯೆಂದು ಶಾಸ್ತ್ರಗಳ ನಂಬುಗೆ. ಅದು ನಿನ್ನಿಂದ ಈಡೇರಬೇಕು. ಹಾಗಾಗಬೇಕಾದರೆ ನೀನು ಲಗ್ನವಾಗ ಬೇಕು. ಆಗ ನನಗೆ ಆನಂದ."

"ಇಷ್ಟುಮಾತ್ರಕ್ಕೆ ತಮಗೆ ಯೋಚನೆಯೇ! ಈ ವಿಚಾರವನ್ನು ತಾವು ಇದು ವರೆಗೆ ಅಂದುಕೊಳ್ಳಲೇ ಇಲ್ಲ."

"ನಿನ್ನ ಮನಸ್ಸಿಗೆ ಅದು ವ್ಯತಿರಿಕ್ತವೆಂದು ನಾನು ಯೋಚನೆ ಮಾಡಿದೆ."

"ತಮ್ಮ ಮನಸ್ಸಿಗೆ ವ್ಯತಿರಿಕ್ತವಾದರೆ ನನಗೂ ಹಾಗೆಯೇ ಸರಿ. ತಮ್ಮ ಸಂತೋಷವೇ ನನ್ನ ಸಂತೋಷ."

" ಹಾಗಾದರೆ ಲಗ್ನಕ್ಕಾಗಿ ಪ್ರಯತ್ನ ಮಾಡಬಹುದಲ್ಲಾ ! ''

" ಆ ವಿಚಾರದಲ್ಲಿ ನನ್ನನ್ನು ಕೇಳಬೇಕಾದ್ದೇ ಇಲ್ಲ. ತಮ್ಮ ಇಷ್ಟಕ್ಕೆ ನಾನೆಂದಿಗೂ ವಿರೋಧಿಯಲ್ಲ. "

ಹೀಗೆ ಮಾತನಾಡಿ ಇಬ್ಬರೂ ಮಲಗಿದರು. ಸೂರ್ಯೋದಯವನ್ನೇ ಇದಿರು ನೋಡುತ್ತಿದ್ದ ಕೇಸನ ಮಂತ್ರಿಯು ಉಷಃಕಾಲಕ್ಕೆ ಎದ್ದು ತನ್ನ ನಿತ್ಯಕರ್ಮಗಳನ್ನು ತೀರಿಸಿಕೊಂಡು ಕೋದಂಡರಾಮಸ್ವಾಮಿಯ ದೇವಾಲಯಕ್ಕೆ ಹೋಗಿ ಪೂಜೆಯನ್ನು ಮಾಡಿಸಿದನು ಸ್ವಾಮಿಯ ವಿಗ್ರಹಗಳನ್ನು ಆ ದಿನ ಆತನು ನೋಡಿದುದೇ ಒಂದು ವಿಧವಾಗಿದ್ದಿತು. ಆನಂದವು ಮುಖದಲ್ಲಿ ಉಕ್ಕಿ ಬರುತ್ತಿದ್ದಂತೆಯೂ ಕೇಸನ ಮಂತ್ರಿಯ ಇಷ್ಟಾರ್ಥಗಳೆಲ್ಲಾ ಫಲಿಸಿತೆಂದು ಹೇಳಿದಂತೆಯೂ ಇದ್ದಿತು. ಸ್ವಾಮಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಮನೆಗೆ ಬಂದು ಅಂದಿನಿಂದಲೇ ಪ್ರಯತ್ನ ಮಾಡಿ ಸಮೀಪ ಬಂಧುಗಳಲ್ಲಿದ್ದ "ಲಕ್ಷ್ಮಿ" ಎಂಬ ಕನ್ಯೆಯನ್ನು ಮಗನಿಗೆ ಕೊಡಲು ನಿಶ್ಚಯ ಮಾಡಿ ಜೋಯಿಸರಿಂದ ಲಗ್ನವನ್ನೂ ನಿರ್ಣಯ ಮಾಡಿಸಿದನು. ಲಗ್ನದ ದಿನಗಳು ಸಮೀಪಿಸಿದ ಹಾಗೆಲ್ಲಾ ಊರಿನಲ್ಲಿ ಆನಂದದ ನದಿಯು ಹರಿಯಲಾರಂಭಿಸಿತು. ನಮ್ಮ ಪೋತನಾಮಾತ್ಯನಿಗೆ ಲಗ್ನ ! ನಾವೆಲ್ಲರೂ ಕೈಲಾದ ಸಹಾಯವನ್ನು ಮಾಡಬೇಕೆಂದು ಪ್ರತಿಯೊಬ್ಬರೂ ಕೇಸನಮಂತ್ರಿಯ ಮನೆಗೆ ಆಹ್ವಾನವಿಲ್ಲದೆಯೇ ಬರುತ್ತಿದ್ದರು. "ಪೋತನ ಲಕ್ಷ್ಮಿ"ಯರ ವಿವಾಹ ಸಂಭ್ರಮಗಳು ಕೇಸನಮಂತ್ರಿಯ ಮನೆಯೊಂದರಲ್ಲಿಯೇ ಅಲ್ಲ. ಊರಿನಲ್ಲೆಲ್ಲಾ ಸಡಗರವಾಗುತ್ತಾ ಬಂದಿತು. ಪ್ರತಿಯೊಬ್ಬರೂ ದಂಪತಿಗಳನ್ನು ತಮ್ಮ ಮನೆಯ ಮುಂದೆ ಕೂಡಿಸಿ ಅವರ ಶ್ರೇಯಸ್ಸಿಗೆ ಆರತಿ ಅಕ್ಷತೆಗಳನ್ನು ಮಾಡಬೇಕೆಂದು ಮನೆಮನೆಯ ಮುಂದೆಯೂ ಚಪ್ಪರಗಳ ಅಲಂಕಾರವಾಯಿತು. ಶಕ್ತಿಗೆ ಲೋಪವನ್ನು ತರದೆ ಪ್ರತಿಯೊಬ್ಬರೂ ಅಲಂಕಾರ ಕಾರ್ಯಗಳನ್ನು ಮಾಡುತ್ತಿದ್ದರು. ಹೆಣ್ಣುಮಕ್ಕಳು ದೊಡ್ಡವರನ್ನು ಕೇಳಿ ಆಶೀರ್ವಾದದ ಹಾಡುಗಳನ್ನು ಕಲಿಯಲಾರಂಭಿಸಿದರು. ಒಬ್ಬರಿಗಿಂತ ಒಬ್ಬರು ಮೇಲಾಗಬೇಕೆಂಬ ಉತ್ಸಾಹವಿಲ್ಲದ ಮಗುವೇ ಆ ಊರಿನಲ್ಲಿರಲಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. 'ಆಹಾ ! ಪೋತನಾಮಾತ್ಯನ ಅದೃಷ್ಟವೇ ಅದೃಷ್ಟ' ಎಂಬ ಮಾತು ಪ್ರತಿಯೊಬ್ಬರ ಬಾಯಲ್ಲಿಯೂ ಬರಲಾರಂಭಿಸಿತು. ಒಂದು ಶುಭ ದಿನ. ಶುಭ ಯೋಗ ಸುತಾರೆಯ ಶುಭ ಲಗ್ನದಲ್ಲಿ ಲಗ್ನವು ನಡೆಯಿತು. ಲಗ್ನ ಕಾಲದಲ್ಲಿ ಊರೇ ಹಿಡಿಯದಂತೆ ಜನರ ಗುಂಪು ಸೇರಿತು. ಎಲ್ಲರೂ ತಮ್ಮ ಶಕ್ತ್ಯಾನುಸಾರ ತಂದಿದ್ದ ಉಡುಗೊರೆಗಳು ಕೇಸನ ಮಂತ್ರಿಯ ಮನೆಯೇ ಹಿಡಿಯದಂತಿದ್ದಿತು. ಇವನ್ನೆಲ್ಲಾ ನೋಡಿ ಖಿನ್ನನಾಗಿದ್ದು ಲಾಜಾ ಹೋಮವಾದ ಮೇಲೆ ಪುರೋಹಿತರ ಅಪ್ಪಣೆಯನ್ನು ಪಡೆದು ಪೋತನನು ಸಭಾಮಧ್ಯದಲ್ಲಿ ಕೈಗಳನ್ನು ಜೋಡಿಸಿ ನಿಂತುಕೊಂಡು,

ಅಣ್ಣಂದಿರಾ ! ತಮಗೆ ನನ್ನಲ್ಲಿರುವ ಅಮೋಘವಾದ ವಾತ್ಸಲ್ಯಕ್ಕಾಗಿ ನಾನು ಆಜೀವ ಪರ್ಯಂತ ತಮ್ಮ ಸೇವೆಯನ್ನು ಮಾಡಿದರೂ ಸಾಲದು. ದಯವಿಟ್ಟು ನನ್ನನ್ನು ಸಾಲಗಾರನನ್ನಾಗಿ ಮಾಡಬೇಡಿ. ಪ್ರಪಂಚದ ಮಾನವಲೋಕದಲ್ಲಿ ವಿವಾಹವೆಂಬುದು ಸ್ತ್ರೀ ಪುರುಷರ ಮೈತ್ರಿಯನ್ನು ವೃದ್ಧಿಪಡಿಸಲು ಮಾಡುವ ಒಂದು ಸಂತೋಷ ಕೂಟ ! ಇದಕ್ಕೆ ಲಗ್ನದ ವಧೂವರರೇ ಪ್ರಧಾನ ಪಾತ್ರಗಳು. ಉಳಿದವರು ದಂಪತಿಗಳ ಶ್ರೇಯೋಭಿವೃದ್ಧಿಯನ್ನು ಬಯಸುವ ಹಿತೈಷಿಗಳು. ಈ ತತ್ವವನ್ನು ಪ್ರತಿಯೊಬ್ಬರೂ ಗ್ರಹಿಸಿ ಕೆಲಸ ಮಾಡಬೇಕು. ಹೆಚ್ಚಿಗೆ ಮಾಡತಕ್ಕ ಕಾರ್ಯಗಳೆಲ್ಲಾ ಬಾಹ್ಯಾಡಂಬರಗಳು. ಇದರಿಂದ ಯಾವ ಸುಖವೂ ಇಲ್ಲ. ನಮ್ಮ ಮನಸ್ಸನ್ನು ಕೆಡಿಸುವ ಅಸ್ಥಿರವಾದ ಪದಾರ್ಥಗಳಿಗಾಗಿ ಸಾವಿರಗಟ್ಟಲೆ ದ್ರವ್ಯವನ್ನು ವ್ಯಯ ಮಾಡುವುದು ಯಾವ ಲೌಕಿಕ? ಅಥವಾ ಪಾರಮಾರ್ಥಿಕ ? ಎರಡಕ್ಕೂ ತಪ್ಪಿದುದಕ್ಕೆ ವ್ಯಯವೇಕೆ ? ಈಗ ನೀವು ತಂದಿರುವ ವಸ್ತ್ರಾಭರಣಗಳು ನಿಮ್ಮ ವಿಶ್ವಾಸ ಸೂಚಕಗಳಾಗಿವೆ. ಅವನ್ನು ನಾನು ವ್ಯಥೆಯಿಂದ ನೋಡುತ್ತಿದ್ದೇನೆ. ಅದೇನೆಂದು ಕೇಳುವಿರಾ ? ಇಲ್ಲಿ ಸೇರಿರುವ ಜನರೆಲ್ಲಾ ನನ್ನನ್ನು ನಿಜವಾಗಿಯೂ ನಿಮ್ಮ ತಮ್ಮನೆಂದು ಭಾವಿಸುವದಾದರೆ ಈ ಪದಾರ್ಥಗಳೆಲ್ಲಾ ನಿಮ್ಮ ಮನೆಗಳಲ್ಲಿಯೇ ಇದ್ದರೆ ನನ್ನ ಮನೆಯಲ್ಲಿದ್ದಂತಾಗಲಿಲ್ಲವೆ ? ಇಷ್ಟು ಜನರ ಕಷ್ಟಾರ್ಜಿತವನ್ನು ಕದ್ದು ನನ್ನ ಮನೆಯಲ್ಲಿ ತುಂಬಿದರೆ ಅದನ್ನು ಕಾಪಾಡುವ ಭಾರವು ಯಾರದು ? ನಾನು ಮಾಡುತ್ತಿರುವ ಲೋಕಸೇವೆಯನ್ನು ನಿಲ್ಲಿಸಿ ತಮ್ಮ ಪದಾರ್ಥಗಳಿಗೆ ಕಾವಲಿರುವ ಚಾಕರಿಯನ್ನು ನನಗೆ ಕೊಡಬೇಕೆಂದಿರುವಿರಾ ? ಲಗ್ನಗಳ ನೆವದಿಂದ ಸಾಲಗಳನ್ನು ಮಾಡಿ ಇತರರನ್ನು ತೃಪ್ತಿಪಡಿಸಬೇಕೆಂಬ ಹೆಮ್ಮೆಯಿಂದ ಎಷ್ಟು ಜನ ಬಡವರಾಗುತ್ತಿದ್ದಾರೆ ? ಸಾಲಕ್ಕಿಂತ ಮನುಷ್ಯನಿಗೆ ಶತ್ರುವು ಯಾರು ? ಇಂತಹ ಪ್ರಬಲ ವೈರಿಯನ್ನೇ ಎಲ್ಲರೂ ತಾವಾಗಿ ಬರಮಾಡಿಕೊಳ್ಳುವುದಕ್ಕಿಂತಲೂ ಮೌಢ್ಯವೆ ? ಹಸಿದವರಿಗೆ ಅನ್ನವನ್ನಿಡುವುದು ಲೋಕ ಧರ್ಮವಾಗಿರಬೇಕಲ್ಲದೆ ಉಂಡವರಿಗೆ ಮತ್ತೆಮತ್ತೆ ಬಲವಂತದಿಂದ ಊಟ ಮಾಡಿಸುತ್ತಾ ಬಂದರೆ ಅದೇ ಆ ಪ್ರಾಣಿಗೆ ವಿಷವಾಗಬಹುದಲ್ಲವೆ ? ತಿರಿದು ತಿನ್ನುತ್ತಾ ಒಪ್ಪೊತ್ತಿನ ಕೂಳಿಗಾದರೂ ಗತಿಯಿಲ್ಲದೆ ಬೀದಿಯಲ್ಲಿ ಪ್ರಾಣ ಬಿಡುತ್ತಿರುವವರನ್ನು ಲಕ್ಷ್ಯವೇ ಮಾಡದೆ, ಮಣೆಗಳಮೇಲೆ ಕುಳ್ಳಿರಿಸಿ ಬಾಳೆಯೆಲೆಯ ತುಂಬಾ ಭಕ್ಷ್ಯಗಳ ಅಲಂಕಾರವನ್ನು ಮಾಡಿ "ಸ್ವಾಮಿಗಾ ! ಊಟವಾಗಲಿ" ಎಂದು ಹೇಳಿದರೆ ಅದುವರೆವಿಗೆ ಆರುಸಲ ಫಲಹಾರ ಮಾಡಿರುವ ಆ ಸ್ವಾಮಿಯು ಎಷ್ಟುತಾನೇ ಉಂಡಾನು ? ಎಲೆಗಳಲ್ಲಿ ಬಿಟ್ಟಿರುವ ಪದಾರ್ಥಗಳಿಂದ ನಾಯಿಗಳಿಗೆ ವ್ಯಾಜ್ಯಗಳನ್ನು ಇಡಬೇಕೆಂಬುದು ಯಾವ ಸನಾತನ ಧರ್ಮ ? ಪಾತ್ರಾಪಾತ್ರವನ್ನರಿತು ಮಾಡುವ ದಾನವು ಸದ್ವಿನಿಯೋಗವಾಗುವುದಲ್ಲವೆ ? ಆಡಂಬರಕ್ಕಾಗಿ ಮಾಡುವ ದಾನವು ಸಾಧನವೆ ? ಈಗ ನೀವು ತಂದಿರುವ ವಸ್ತ್ರಗಳನ್ನು ಛಳಿಯಿಂದ ನಡುಗುತ್ತಿರುವವರಿಗೆ ಕೊಟ್ಟರೆ ಆ ಪ್ರಾಣಿಗೆ ಆನಂದವಲ್ಲವೆ ? ಅಂತಹವರ ಆನಂದವೇ

ನನ್ನ ಆನಂದ ! ಅದನ್ನು ನೀವು ನೋಡಬೇಕೆಂದಿದ್ದರೆ ಇವುಗಳನ್ನು ಅನಾಥರಿಗೆ ಕೊಡಿ. ತಮ್ಮ ಪದಾರ್ಥಗಳ ಕಾವಲಿಗಾಗಿ ನನ್ನನ್ನು ಇಡಬೇಕೆಂದಿದ್ದರೆ ನನಗೇ ಕೊಡಿ. ತಮ್ಮ ಅಮೋಘವಾದ ಅಭಿಮಾನಕ್ಕಾಗಿ ನನ್ನ ಅನೇಕ ವಂದನೆಗಳು. ಇಂದು ತಾವೆಲ್ಲರೂ ಸೇರಿ ಈ ಹುಡುಗನ ಶ್ರೇಯೋಭಿವೃದ್ಧಿಯನ್ನು ಬಯಸಿದುದಕ್ಕೆ ನಾನು ಆಜನ್ಮ ಪರ್ಯಂತ ತಮ್ಮ ಸೇವಕನೆಂದು ತಿಳಿಯಿರಿ.''

ಅನ್ನುತ್ತಾ ಕಣ್ಣೀರು ಕಾಲುವೆಯನ್ನು ಹರಿಸಿದನು. ಅದನ್ನು ನೋಡಿ ಬಂದಿದ್ದ ವರಿಗೆಲ್ಲಾ ಗದ್ಗದ ಕಂಠವಾಯಿತು. 'ಈತನು ಶ್ರೀರಾಮರ ಅವತಾರವೇ ಸರಿ ! ಆ ಮಗುವು ಲಕ್ಷ್ಮಿಯಲ್ಲದೆ ಸಾಮಾನ್ಯ ವಧುವಿನಂತೆ ಕಂಡುಬರಲೇ ಇಲ್ಲ. ಈ ದಾಂಪತ್ಯವು ಲೋಕಕ್ಕೆ ಮೇಲುಪಙ್ತಿಯಾಗಲಿ ! ಇವರಿಗೆ ಭಗವಂತನು ಸದಾ ಸನ್ಮಂಗಳಗಳನ್ನು ಕೊಡಲಿ ! 'ಒಮ್ಮೆರ ಪೋತನಾ' ನೀನು ಸುಗುಣನಿಧಿ ! ನಾವು ಮೂಢರು. ವಯಸ್ಸೆಷ್ಟಾದರೇನು ? ಜ್ಞಾನವಿಲ್ಲದ ಮುದಿತನಕ್ಕಿಂತ ಜ್ಞಾನಿಯ ಬಾಲ್ಯವು ಎಷ್ಟು ಮಹತ್ತರವಾದುದು. ನಾವು ಲಗ್ನಗಳ ಕಾಲದಲ್ಲಿ ಅನ್ಯಾಯವಾಗಿ ದ್ರವ್ಯವನ್ನು ವ್ಯಯ ಮಾಡುತ್ತಿದ್ದೆವು. ಪರಮ ಗುರುವಾದ ನೀನು ನಮ್ಮ ಹಿತ ಚಿಂತಕನಾಗಿ ಮಾಡಿದ ಉಪದೇಶವು ಆಜನ್ಮಪರ್ಯಂತ ಜ್ಞಾಪಕದಲ್ಲಿರತಕ್ಕದ್ದು.' ಎಂದು ಹೇಳುತ್ತಾ ಸಭೆಯು ಜಯಕಾರದಿಂದ ತುಂಬಿಹೋಯಿತು. ಪುಷ್ಪವೃಷ್ಟಿ ಯಾಯಿತು. ಈ ಆನಂದಸಾಗರದ ಮಧ್ಯದಲ್ಲಿ ಪೋತನಾಮಾತ್ಯನು ತಲ್ಲೀನ ನಾದನು. ಮುಹೂರ್ತ ಕಾಲ ಯಾರಿಗೆ ಏನೂ ತೋರದಂತಾಗಿ ಸಭೆಯು ಕೊನೆ ಗಂಡಿತು.

ಇದಲ್ಲವೇ ನಿಜವಾದ ಆನಂದಕೂಟ !

## ಕೇಸನ ಮಂತ್ರಿಯ ನಿರ್ಯಾಣ

ಲಗ್ನವಾದಮೇಲೆ ಪೋತನಾಮಾತ್ಯನು ತನ್ನ ನಿಯಮಿತ ಕಾರ್ಯಗಳಿಗೆ ಎಳ್ಳಷ್ಟು ಲೋಪವನ್ನು ತರದಂತಿದ್ದನು. ದನ ಕಾಯುವುದು ಹೀನಾಯವೆಂದು ಯೋಚಿಸ ಲಿಲ್ಲ. ಜತೆಯವರಿಗೆ ಆಗಾಗ ವಿವೇಕ ಹೇಳುವುದರಲ್ಲಿ ಬೇಸರಪಡುತ್ತಿರಲಿಲ್ಲ. ಸಂಸಾರದಲ್ಲಿ ಬಹಳ ಆದರವುಳ್ಳವನಾಗಿ ಹೆಂಡತಿಯನ್ನು ಮಿತ್ರಳಂತೆ ನೋಡು ತ್ತಿದ್ದನು. ಇವರ ಸರಳ ಜೀವನವು ಕೇಸನ ಮಂತ್ರಿಗೆ ಆನಂದಕರವಾಗಿದ್ದಿತು. ಪುರಾಣ ಹೇಳುವುದರಲ್ಲಿ ಉತ್ಸಾಹವು ಹೆಚ್ಚುತ್ತಾ ಬಂದಿತು. ಕೇಳುವವರಿಗೆ ಇವಕ್ಕೆ ಇಮ್ಮಡಿಯಾಗಿದ್ದಿತು. ದುರಭಿಮಾನವೆಂಬುದು ಈತನ ಹತ್ತಿರಕ್ಕೇ ಬರುತ್ತಿರಲಿಲ್ಲ. ಕಡೆಗೆ ಅದು ಏಕಶಿಲಾ ನಗರವನ್ನೇ ಬಿಡಬೇಕಾಯಿತು. ಆನಂದಲತೆಯು ಊರಿ ನಲ್ಲೆಲ್ಲಾ ಹಬ್ಬಿತು. ಆ ಗ್ರಾಮವು ನಿಜವಾಗಿಯೂ ಕಲಿಯುಗ ವೈಕುಂಠವಂ

ಪ್ರಕಾಶಿಸುತ್ತಿತ್ತು. ಆದಿವ್ಯಾಧಿಗಳೂ ಅಕಾಲಮರಣಗಳೂ ಗ್ರಾಮವನ್ನೇ ಸೇರಲು ಭಯಪಡುತ್ತಿದ್ದುವು. ಕ್ಷಾಮವೆಂಬ ಸೊಲ್ಲೇ ಅಡಗಿತು. ಊರಿನಲ್ಲೆಲ್ಲಾ ಹುಡುಕಿದರೂ ಅಪುತ್ರವಂತರು, ರೋಗಿಗಳು ಅಸಹಾಯಕರು ದರಿದ್ರರು ಸಿಕ್ಕುತ್ತಲೇ ಇರಲಿಲ್ಲ. ಈ ಆನಂದಸಾಗರವು ಪೋತನಾಮಾತ್ಯನಿಂದಾಯಿತೆಂಬುದನ್ನು ಮರೆಯಲೇ ಇಲ್ಲ.

ದೈವಭಕ್ತಿಯು ಮನುಷ್ಯನ ಆನಂದಕ್ಕೆ ಮೂಲ. ಆನಂದವು ಇಹ ಪರ ಸುಖ ಸಾಧನೆ. ಆನಂದಸ್ವರೂಪವೇ ಲೋಕಸೇವೆ. ಅನವರತವೂ ಇತರರ ಹಿತವನ್ನು ಬಯಸುತ್ತಿರುವುದೇ ಧರ್ಮ. ಮನುಷ್ಯ ಶರೀರವು ತನ್ನ ಸುಖವನ್ನು ಅಪೇಕ್ಷಿಸುವುದು ರೂಢಿ. ಇದರಿಂದ ಹಾನಿ ವೃದ್ಧಿಗಳು ಆಗಾಗ ಬರುತ್ತಿರುವುವು. ಈ ಹಾನಿ ವೃದ್ಧಿಗಳೇ ವ್ಯಥೆಗೆ ಪ್ರಥಮ ಸೋಪಾನ. ಶರೀರ ಸುಖಕ್ಕಾಗಿ ಕಿತ್ತಾಡುವ ಪ್ರತಿಯೊಬ್ಬನೂ ವ್ಯಥೆಯನ್ನು ಸಂಪಾದಿಸಿದಂತೆಯೇ! ಕ್ಷಣಿಕವಾದ ಸುಖವು ಕ್ಷಣಕಾಲ ಆನಂದವನ್ನುಂಟುಮಾಡುತ್ತದೆ. ಹಿಂದೆಯೇ ಸಹಿಸಲಸಾಧ್ಯವಾದ ತೊಂದರೆಯನ್ನು ಕೊಡುತ್ತದೆ. ತೊಂದರೆಗೆ ಸಿಕ್ಕದಿರಬೇಕೆಂದಿರುವವನು ಕಷ್ಟವನ್ನು ಬಾಲ್ಯದಿಂದಲೂ ಅಭ್ಯಾಸ ಮಾಡಬೇಕು. ಅವನಿಗೆ ಸುಖದ ಹಂಬಲವೇ ಇರುವುದಿಲ್ಲ. ಸುಖಾಪೇಕ್ಷೆಯೇ ಸೋಮಾರಿತನ. ಇದರಿಂದ ಲೋಕಕ್ಕೆ ಯಾವ ಉಪಯೋಗವೂ ಇಲ್ಲ. ನಮ್ಮ ಶರೀರವು ಎಲ್ಲಾ ತೊಂದರೆಗಳನ್ನೂ ಸಹಿಸುವ ಸಾಮರ್ಥ್ಯವನ್ನು ಪಡೆದಿದೆ. ಕೆಲಸವೇ ಅಲ್ಲದೆ ಜಡವಾಗಿರುವ ಸ್ವಭಾವವನ್ನೂ ಪಡೆದಿದೆ. ಜಡತ್ವದಿಂದ ಲೋಕಕ್ಕೆ ತೊಂದರೆ ತನಗೆ ಕಷ್ಟ! ಪರಮಾತ್ಮನು ಕಷ್ಟಪಡುವುದೂ ಇಲ್ಲ. ಸುಖವಾಗಿರುವುದೂ ಇಲ್ಲ. ಆತನಿಗೆ ಯಾವ ಹಂಬಲವೂ ಇಲ್ಲ. ತಾಪತ್ರಯರಹಿತನಾಗಿರುತ್ತಾನೆ. ಸ್ಥೂಲ ದೇಹಕ್ಕೀಗ ಎಲ್ಲವೂ ಬೇಕು. ಸ್ಥೂಲ ದೇಹವೇ ಪರಮಾತ್ಮನ ನಿವಾಸ ಸ್ಥಳ. ಆನಂದಸ್ವರೂಪಿಯೂ ನಿರ್ಗುಣನೂ, ನಿರಾಕಾರನೂ, ಅವಾಙ್ಮಾನಸಗೋಚರನೂ ಆದ ಆ ಸಚ್ಚಿದಾನಂದಸ್ವರೂಪನು ಸ್ಥೂಲ ಶರೀರದಲ್ಲಿ ಸೇರಿಕೊಂಡು ತನ್ನ ಕೈಗೊಂಬೆಯಂತೆ ಶರೀರವನ್ನು ಆಡಿಸುತ್ತಾನೆ. ಆತನಿಗೆ ಎಲ್ಲವೂ ಇಷ್ಟವೇ! ಕುಣಿದಾಟವೇ ಪ್ರಪಂಚ ನಾಟಕ. ಈ ನಾಟಕವು ಭೂಮಿಯೆಂಬ ರಂಗಸ್ಥಳದಲ್ಲಿ ನಡೆಯುತ್ತಿರುವುದು. ಇದಕ್ಕೆ ಶರೀರಧಾರಿಗಳೆಲ್ಲರೂ ಪಾತ್ರವರ್ಗ. ಪ್ರೇಕ್ಷಕರೂ ಅವರೇ! ನಮ್ಮ ಅನುಭವದ ವಿಷಯಗಳನ್ನು ಮನಸ್ಸಿಗೆ ಗ್ರಾಹ್ಯ ಮಾಡಿಕೊಳ್ಳದಿರುವಿಕೆಯೇ ಮರವು. ಗ್ರಾಹ್ಯ ಮಾಡಿಕೊಳ್ಳುವುದೇ ಅರಿವು. ಅರಿವುಂಟಾದಮೇಲೆ ಜಡವೂ ಅಸ್ಥಿರವೂ ಆದ ಈ ಶರೀರಾಭಿಮಾನವು ಹೋಗುತ್ತದೆ. ಎಲ್ಲಾ ಶರೀರಗಳೂ ಒಂದೇ, ಯಾವುದೂ ನಿಲ್ಲುವುದಿಲ್ಲ, ಎಂಬ ದೃಢವು ತಾನಾಗಿಯೇ ಉಂಟಾಗುತ್ತದೆ. ಸದಾ ಇರುವ ವಸ್ತುವು ಒಂದರಲ್ಲೊಂದು ಸೇರುವ ವಿಚಾರವನ್ನು ವಿಮರ್ಶೆ ಮಾಡಿಕೊಳ್ಳುವುದೇ ಅರಿವುಂಟಾದ ಶರೀರಧಾರಿಯ ಮುಖ್ಯ

ಕರ್ತವ್ಯವೆನಿಸುತ್ತದೆ. ಅದನ್ನು ಪಡೆಯಲು ತಕ್ಕ ಸಾಧನಗಳನ್ನು ಮಾಡುತ್ತಾನೆ. ಅಂತಹವನಿಗೆ ಪ್ರಪಂಚವೆಲ್ಲಾ ಒಂದೇ ಎಂಬ ಭಾವನೆಯುಂಟಾಗುತ್ತದೆ. ತನ್ನ ಮನೆಯಂತೆಯೇ ಎಲ್ಲಾ ಮನೆಗಳೂ ಇರಬೇಕೆಂದೂ ಆತ್ಮಸ ಪರಿತಾಪವು ಯಾವ ಶರೀರದಲ್ಲಿಯೂ ಇರಬಾರದೆಂದೂ ಸಂಕಲ್ಪ ಮಾಡುತ್ತಾ ಶರೀರವನ್ನು ಧಾರಣ ಮಾಡತಕ್ಕವನೀಗ ಮನುಷ್ಯರಲ್ಲಿ ಪೂಜ್ಯನು.

ಒಂದುದಿನ ಪೋತನನು ತನ್ನ ಉಪನ್ಯಾಸವನ್ನು ಈ ರೀತಿ ಪ್ರಾರಂಭಿಸಿದನು. ಅಗ್ರಾಹ್ಯವಾದ ಈತನ ಭಾವಗಳು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿದುವು. ಯಾರ ಬಳಿಯಲ್ಲಿಯೂ ಗುರೂಪದೇಶವನ್ನು ಪಡೆಯದೆಯೇ ಈತನಿಗೆ ಈ ಗುಣಗಳು ಎಲ್ಲಿಂದ ಬಂದುವು ? ಎಂದು ಜನರು ಆಡಿಕೊಳ್ಳುತ್ತಾಬಂದರು. ಇಷ್ಟರಲ್ಲಿಯೇ ನಾಲ್ಕು ವರ್ಷಗಳು ಕಳೆದುವು. ಕೇಸನ ಮಂತ್ರಿಯು ಮಗನ ಆನಂದಬೋಧೆಯನ್ನು ನಿಲುಕಡೆಯಿಲ್ಲದೆ ಕೇಳುತ್ತಿದ್ದನು. ಭೌತಿಕ ಶರೀರದಲ್ಲಿ ಆತನಿಗೆ ಬೇಸರವುಂಟಾಯಿತೆನ್ನುವಹಾಗೆ ರೋಗಗ್ರಸ್ಥನಾಗಿ ಹಾಸಿಗೆಯನ್ನು ಹಿಡಿದನು. ಜಾಡ್ಯದ ಸ್ವಭಾವವು ಒಳ್ಳೆಯದನ್ನುಂಟುಮಾಡಲಾರದೆಂಬ ನಂಬುಗೆಯು ಬರುತ್ತಲೇ ಮಗನನ್ನು ಹತ್ತಿರಕ್ಕೆ ಕರೆಯಿಸಿಕೊಂಡು ನೋಡಿದನು. ಆತನ ಕಣ್ಣಿನಲ್ಲಿ ನೀರು ಪ್ರವಾಹವಾಗಿ ಹರಿಯುತ್ತಿತ್ತು. ಮಮಕಾರವು ಅಧಿಕವಾಯಿತು. ತುಟಿಗಳು ಕಂಪಿಸುತ್ತಿದ್ದುವು. ಕಣ್ಣುಗಳು ಗಿರಗಿರನೆ ತಿರುಗುತ್ತಿದ್ದುವು. ಅಂದಿನ ಚರ್ಯೆಗಳೇ ಒಂದು ವಿಧವಾಗಿದ್ದುವು. ಇದರಿಂದ ಪೋತನನಿಗೆ ಎಷ್ಟುಮಾತ್ರವೂ ಆಶ್ಚರ್ಯವಾಗಲೀ ವ್ಯಥೆಯಾಗಲಿ ಆಗಲಿಲ್ಲ. ತಂದೆಯ ಮನೋಭಿಃಪ್ರಾಯವನ್ನು ಗ್ರಹಿಸಿಕೊಂಡು—

“ಅಪ್ಪಾ ! ನಶ್ವರವಾದ ಸುಖಗಳ ಮೇಲಣ ಆಶೆಯು ಕಡೆಯುವರೆವಿಗೂ ಲಯವಾಗದಿರುವುದೇಕೆ ? ಶರೀರದಲ್ಲಿರುವ ಚೈತನ್ಯವು ಎಂದೆಂದಿಗೂ ಒಂದೇ ಶರೀರದಲ್ಲಿಯೇ ಇರುವುದು ರೂಢಿಯಲ್ಲಿಯೇ ಇಲ್ಲ. ಎಂದೋ ಹೊರಟುಹೋಗುವ ಶಿಥಿಲವಾದ ಈ ಮನೆಗಾಗಿ ವೃಥಾ ಅಭಿಮಾನವು ಲೋಕ ವಿರೋಧವಲ್ಲವೆ ? ಪ್ರತಿಯೊಬ್ಬನೂ ಹುಟ್ಟಿದ ದಿನವೇ ಮರಣದ ದಿನವನ್ನು ಗೊತ್ತು ಮಾಡಿಕೊಂಡೇ ಬಂದಿರುತ್ತಾನೆ. ಆ ದಿನವು ಗೊತ್ತಾಗದಿರುವಿಕೆಯೇ ಲೋಕ ಸ್ವಭಾವ. ಮರಣಕ್ಕಾಗಿ ಮೂರ್ಖರು ವ್ಯಥೆಪಡುತ್ತಾರೆ. ವಿವೇಕಿಗಳು ಆನಂದಪಡುತ್ತಾರೆ. ಪಾರ್ಥಿವ ಶರೀರವು ಭೂಮಿಯ ಮೇಲಿರುವವರೆಗೂ ಪರಮಾತ್ಮನಿಗೆ ಅಥವಾ ಶರೀರದಲ್ಲಿರುವ ಶಕ್ತಿಗೆ ತೊಂದರೆಗಳು ತಪ್ಪಿದುದೇ ಅಲ್ಲ. ಆತನು ಕರ್ತನೂ ಅಲ್ಲ ಭೋಕ್ತನೂ ಅಲ್ಲ. ಸಾಕ್ಷಿಮಾತ್ರದವನು. ಈತನ ಕೆಲಸವು ವೇತನವಿಲ್ಲದ ಊಳಿಗ. ಹೀಗೆ ಮಾಡುವುದು ಯಾರಿಗಾದರೂ ಇಷ್ಟವಿದೆಯೆ ? ಪ್ರತಿಫಲಾಪೇಕ್ಷೆಯಿಲ್ಲದೆ ಪರಮಾತ್ಮನಿಂದ ಕೆಲಸ ಮಾಡಿಸುತ್ತಿರುವುದೇ ಶರೀರಧಾರಿಯ ಕರ್ತವ್ಯ. ಇಂತಹ ಶರೀರವು ಇದ್ದರೇನು ?

ಹೋದರೇನು ? ಎಂಬ ತಿರಸ್ಕಾರವು ಹುಟ್ಟುವಿಕೆಯೇ ಅಭಿಮಾನ ರಾಹಿತ್ಯ. ಅದನ್ನು ಪಡೆಯುವುದೇ ಜೀವನ್ಮುಕ್ತರ ಲಕ್ಷಣ." ಈ ಮಾತುಗಳನ್ನು ಕೇಳಿ ಆನಂದದ ಉದ್ರೇಕದಿಂದ ಕೇಸನ ಮಂತ್ರಿಯು ಮಗನೊಡನೆ,

"ಅಪ್ಪಾ! ಈ ಶರೀರವು ಹೇಗೂ ನಿಲ್ಲುವುದಿಲ್ಲ. ನನಗೆ ಯಾವ ಯೋಚನೆಯೂ ಇಲ್ಲದಂತಿರಲು ಸಾಧ್ಯವಾಗಲೂ ಇಲ್ಲ."

"ಅದನ್ನು ಬಿಡಬೇಕಾದುದು ನಿಮ್ಮ ಕೆಲಸ. ಬಂಧುಗಳೆಂಬ ಬಂಧನಗಳೇ ನಿಮ್ಮ ತೊಂದರೆಗೆ ಕಾರಣ. ಅವರ ಮೇಲಣ ಅಭಿಮಾನವು ಶರೀರ ತಾಪತ್ರಯಕ್ಕೆ ಅವಕಾಶವನ್ನು ಕೊಡುತ್ತಿದೆ. ಅದನ್ನು ಕಿತ್ತೊಗೆದಲ್ಲದೆ ತೊಂದರೆಯು ಕಡಿಮೆಯಾಗುವುದೆಂದರೇನು ?"

"ಅಭಿಮಾನವು ಮನುಷ್ಯನ ಹಿಂದೆಯೇ ಇರುವುದು. ಅದನ್ನು ಬಿಡಲು ಸೃಷ್ಟಿಯಲ್ಲಿಯೇ ಅವಕಾಶವಿಲ್ಲವಲ್ಲ ?"

"ನಿಜ! ಅದಕ್ಕೆ ಅವಕಾಶವಿಲ್ಲವೆಂದು ಪೇಚಾಡುವರು ಕಷ್ಟವನ್ನು ಸಹಿಸಿಕೊಳ್ಳಬೇಕಾಗುವುದು. ಕಷ್ಟವು ಅಳುವಿನಿಂದ ಪರಿಹಾರವಾಗುವುದಿಲ್ಲ. ತಾನಾಗಿ ಕೈ ಸುಟ್ಟುಕೊಂಡು ಉಪಚಾರಗಳನ್ನು ಮಾಡುತ್ತಿರುವಂತೆ ಅಭಿಮಾನವೆಂಬ ನೇಣನ್ನು ಕೊರಳಿಗೆ ಬಿಗಿದುಕೊಂಡು, ತಾವು ಸಂಕಟಪಡುವುದಲ್ಲದೆ ಇತರರನ್ನು ಬೆರಗು ಮಾಡುತ್ತಿರುವವರು ಯಾವ ಪುರುಷಾರ್ಥವನ್ನು ಸಂಗ್ರಹಿಸಬಲ್ಲರು ?"

"ಪುರುಷಾರ್ಥವು ಯಾವುದು ? ಅದನ್ನು ಸಂಗ್ರಹಿಸಲು ಮಾಡಬೇಕಾದ ಕಾರ್ಯವು ಯಾವುದು ?"

"ಪುರುಷಾರ್ಥವೆಂದರೆ ಗಂಡಸರು ಸಂಪಾದಿಸಬೇಕಾದ ಧನ. ಲೋಕದಲ್ಲಿ ಎಲ್ಲಾ ಜನ್ಮಗಳಲ್ಲಿಯೂ ಮನುಷ್ಯ ಜನ್ಮವು ಶ್ರೇಷ್ಠವೆಂದೂ ಅದರಲ್ಲಿ ಗಂಡಸಾಗಿ ಹುಟ್ಟುವುದು ಮತ್ತೂ ಶ್ರೇಷ್ಠವೆಂದೂ ನಮ್ಮ ಆರ್ಯರ ಅಭಿಮತ. ಆ ಜನ್ಮವನ್ನು ಶ್ರೇಷ್ಠವಾಗಿ ಮಾಡಿಕೊಳ್ಳಬೇಕಾದುದು ಶರೀರಧಾರಿಯ ಮುಖ್ಯ ಕೆಲಸ. ವ್ಯರ್ಥ ಮಾಡಿದರೆ ಪಶುಪ್ರಾಯನಾಗುವುದು ಖಂಡಿತ. ಜನ್ಮದಿಂದ ಮಾಯೆಯು ಹುಟ್ಟುವುದು. ಇಲ್ಲದುದನ್ನು ಇದ್ದಂತೆ ಕಾಣಿಸುತ್ತಿರುವುದೇ ಮಾಯೆ. ಇಲ್ಲದುದನ್ನು ಇಲ್ಲವೆಂದು ದೃಢ ಮಾಡಿಕೊಳ್ಳುವಿಕೆಯೇ ಜೀವನ್ಮುಕ್ತಿ. ಇದನ್ನು ನಿಶ್ಚಯ ಮಾಡಿಕೊಳ್ಳಬೇಕಾದರೆ 'ನಾನು' 'ನನ್ನದು' ಎಂಬುದನ್ನು ದೂರ ಮಾಡುವುದು ಮೊದಲನೆಯ ಕೆಲಸ. 'ನನ್ನ ಮನೆ' 'ನನ್ನ ಮಕ್ಕಳು' ಎಂಬುದು ಅಭಿಮಾನ. ಯಾರ ಮನೆ? ಯಾರ ಹೆಂಡತಿ? ಯಾರ ಮಕ್ಕಳು? ಎಂಬ ಪ್ರಶ್ನೆಯನ್ನು ಮಾಡಿಕೊಳ್ಳುವುದು ಜೀವನ್ಮುಕ್ತಿನ ಕಾರ್ಯ. ಜನ್ಮದಿಂದ ಯಾವುದೂ ಬರಲಿಲ್ಲ. ಹೋಗು

ವಾಗ ಬರುವುದೂ ಇಲ್ಲ. ಇನ್ನೂ ವಿವರಿಸಬೇಕಾದರೆ ಹೊಸದಾಗಿ ಮನೆಯನ್ನು ಕಟ್ಟಬೇಕೆಂದು ಒಂದು ಶರೀರ ಧಾರಿಗೆ ಅಭಿಮಾನವು ಬಂದರೆ ಅದಕ್ಕಾಗಿ ಧನ ವನ್ನು ಶೇಖರಿಸಲು ಮೊದಲು ಮಾಡುತ್ತಾನೆ. ಧನವು ಸುಮ್ಮನೆ ಬರುವುದಿಲ್ಲ. ಬೇಕಾದಷ್ಟು ತೊಂದರೆಗಳನ್ನು ತನ್ನ ಶರೀರಕ್ಕೆ ಕೊಡುತ್ತಾನೆ. ತನಗೆ ತೊಂದರೆ ಯಾದಾಗ ಇತರರಿಗೂ ತೊಂದರೆಯನ್ನು ಕೊಡಲು ಹಿಂದೆಗೆಯುವುದಿಲ್ಲ. ಇಷ್ಟಾಗಿ ಶರೀರಾಂತ್ಯದವರೆವಿಗೆ ಈ ಕೆಲಸವು ನೆರವೇರುವುದೆಂಬ ನಂಬುಗೆಯೂ ಉಂಟೆ? ಒಂದುವೇಳೆ ಮುಗಿದರೂ ತನ್ನ ಜತೆಯಲ್ಲಿ ಆ ಮನೆಯು ಬರುವುದೆ? ಮಕ್ಕಳ ವಿಚಾರವೂ ಹೀಗೆಯೇ! ಹೆಂಡತಿಯ ವಿಚಾರವೂ ಇದರಂತೆಯೇ! ಅಭಿಮಾನ ವೆಂಬ ಬಲೆಯು ಶರೀರಕ್ಕೆ ಆಚ್ಛಾದನೆಯಾಗಿ ಇಲ್ಲದ ತೊಂದರೆಗಳನ್ನು ಕೊಡುತ್ತದೆ. ಅದನ್ನು ಕಿತ್ತೊಗೆಯಬೇಕಾದರೆ–ಪ್ರಪಂಚವೆಲ್ಲವೂ ಒಂದೇ, ಎಲ್ಲಾ ಶರೀರಗಳೂ ತನ್ನಂತೆಯೇ ಆಟವಾಡಲು ಬಂದಿವೆ; ಪ್ರತಿಯೊಬ್ಬ ಪಾತ್ರಧಾರಿಯೂ ತನ್ನ ನಿಯಮಿತ ಕಾರ್ಯವನ್ನು ಮುಗಿಸಿಕೊಂಡು ಹೊರಟುಹೋಗುತ್ತಾನೆ. ನಾನೂ ಸಹ ನನ್ನ ಆಟವನ್ನು ಮುಗಿಸಬೇಕು; ಅದು ಭಗವದಿಚ್ಛೆಯಂತೆ ನಡೆಯಬೇಕು. ನಾನಾಗಿ ಕಾರ್ಯಗಳನ್ನು ಹುಡುಕಿಕೊಂಡು ಹೋಗಬಾರದು. ಹುಡುಕಿಕೊಂಡು ಹೋಗುವುದೇ ಅಭಿಮಾನ ಎಂದು ದೃಢಮಾಡಿ ಆನಂದದಿಂದಿರುವಾತನೇ ಯೋಗಿ ಪರಮಹಂಸ!"

"ಈ ಲಕ್ಷಣಗಳನ್ನೆಲ್ಲಾ ತಿಳಿದುಕೊಳ್ಳಬೇಕಾದರೆ ಈ ಸಮಯದಲ್ಲಿ ಸಾಧ್ಯವೆ?"

"ಅದು ಇಷ್ಟುಮಾತ್ರದಲ್ಲಿ ಸಾಧ್ಯವಾಗತಕ್ಕದ್ದಲ್ಲ. ಮೊದಲಿನಿಂದಲೂ ರೂಢಿಗೆ ಬರಬೇಕು. ಅಭ್ಯಾಸ ಬಲದಿಂದ ಬರತಕ್ಕ ವಿದ್ಯೆಯಲ್ಲ. ಪೂರ್ವಜನ್ಮ ಸಂಸ್ಕಾರ ವಿಶೇಷದಿಂದ ಇಂತಹ ಗುಣಗಳು ತಾನಾಗಿಯೇ ಹುಟ್ಟುವುವು. ಅದು ಹುಟ್ಟಿದಮೇಲೆ ಅಭಿಮಾನವೆಂಬ ಅಂಧಕಾರವು ಜ್ಞಾನವೆಂಬ ಸೂರ್ಯನನ್ನು ನೋಡಿ ಭಯಪಡುವುದು. ಆ ಶರೀರಧಾರಿಯ ಹತ್ತಿರಕ್ಕೇ ಸೇರುವುದಿಲ್ಲ. ಆಪ್ತೋ ಜ್ಯೋತಿಯ ಪ್ರಕಾಶದಿಂದ ನಡೆಯುತ್ತಿರುವಾತನಿಗೆ ಕತ್ತಲೆಲ್ಲಿಯದು? ಪ್ರತಿ ಯೊಂದು ಪ್ರಾಣಿಯೂ ತಾನು ಹಿಂದೆ ಮಾಡಿದ ಕಳ್ಳತನದಿಂದ ಕತ್ತಲಿನಲ್ಲಿ ಅವಿತು ಕೊಳ್ಳಲು ಪ್ರಯತ್ನಪಡುತ್ತಿರುವುದೇ ಮಾಯೆ. ತನ್ನ ತಪ್ಪನ್ನು ಒಪ್ಪಿಕೊಂಡು ಹಿಂದೆ ಮಾಡಿದ ಕಳ್ಳತನಕ್ಕೆ ಸಂತೋಷದಿಂದ ಶಿಕ್ಷೆಯನ್ನು ಅನುಭವಿಸುತ್ತಾ ಮುಂದೆ ಕಳ್ಳ ತನವನ್ನು ಮಾಡದಂತಿರುವುದೇ ಜೀವನ್ಮುಕ್ತರ ಲಕ್ಷಣ. ಈಗ ತಾವು ಎಲ್ಲವನ್ನೂ ಭಗವದರ್ಪಣೆ ಮಾಡಿ, ಆತನಲ್ಲದೆ ರಕ್ಷಕರಿಲ್ಲವೆಂದು ನಂಬಿ ಭಗವನ್ನಾಮಸ್ಮರಣೆ ಯಿಂದ ಭೌತಿಕ ದೇಹವನ್ನು ಸಾಕುಮಾಡಿದರೆ ಮುಂದೆ ಪಥವು ಸುಲಭವಾಗ ಬಹುದು."

" ಕಳ್ಳತನವನ್ನು ಮಾಡುವುದೆಂದರೇನು? ಅದನ್ನು ಮಾಡದಿರುವುದು ಹೇಗೆ?"

" ಆತ್ಮಸಾಕ್ಷಿಗೆ ವಿರೋಧವಾಗಿ ಮಾಡುವ ಕಾರ್ಯಗಳೆಲ್ಲಾ ಕಳ್ಳತನವೆನಿಸುವುದು. ಅದನ್ನು ಮಾಡದಿರುವುದೆಂದರೆ ಎಲ್ಲಾ ಕೆಲಸಗಳನ್ನೂ ಆತ್ಮಸಾಕ್ಷಿಯಾಗಿ ಮಾಡುವುದೆಂದು ಹೇಳುತ್ತಾರೆ. ಸಂತೋಷವೊಂದೇ ಆತ್ಮಸಾಕ್ಷಿ. ದುರ್ವ್ಯವಹಾರಗಳಲ್ಲಿ ಮನುಷ್ಯನು ನಡೆಯುತ್ತಾ ಬರುವುದು ಆತ್ಮನಿಗೆ ಪರಿತಾಪವನ್ನುಂಟು ಮಾಡುತ್ತದೆ. ಆ ಪರಿತಾಪವೇ ತಾಪತ್ರಯಕ್ಕೆ ಕಾರಣವಾಗುತ್ತದೆ. ಸಂಕಟವೆಂದರೆ ತಲ್ಲಣಿಸುವುದೆಂದು ಅರ್ಥ. ಒಂದು ಶರೀರದಲ್ಲಿ ಪ್ರವೇಶಿಸಿದ ಆತ್ಮನು ತನ್ನ ಮನೆಯಲ್ಲಿ ನಡೆಯುತ್ತಿರುವ ಎಲ್ಲಾ ಕೆಲಸಗಳನ್ನೂ ನೋಡುತ್ತಾ ಇರುತ್ತಾನೆ. ಒಳ್ಳೆಯದು ನಡೆದಾಗ ಆನಂದಪಡುತ್ತಾನೆ. ಕೆಟ್ಟುದಾದಾಗ ವ್ಯಥೆಪಡುತ್ತಾನೆ. ಆತನನ್ನು ನಿಶ್ಚಿಂತನನ್ನಾಗಿಡಬೇಕಾದರೆ ದುಷ್ಕಾರ್ಯಗಳನ್ನು ದೂರ ಮಾಡಬೇಕಾಗುತ್ತದೆ. ಈ ಪ್ರಪಂಚವೆಲ್ಲವೂ ಪರಮಾತ್ಮನ ಆವರಣವೇ ! ಅಂದಮೇಲೆ ಪ್ರತಿಯೊಂದು ವಸ್ತುವೂ ಆತನದೇ ಅಂದ ಹಾಗಾಯಿತು. ಆತನು ಒಂದೊಂದು ಪದಾರ್ಥವನ್ನೂ ಒಂದೊಂದು ಪ್ರಯೋಜನಕ್ಕಾಗಿ ಸೃಷ್ಟಿ ಮಾಡಿದ್ದಾನೆ. ಆ ಪದಾರ್ಥವು ಒಳ್ಳೆಯದೆಂದು ಕೆಲವರೂ ಕೆಟ್ಟುದೆಂದು ಕೆಲವರೂ ಹೇಳುತ್ತಾರೆ. ಅನ್ನದಿಂದ ಮನುಷ್ಯನು ಜೀವಿಸುತ್ತಾನೆ. ಅದನ್ನೇ ಹುಲಿಯು ತಿಂದು ಜೀವಿಸುವುದೆ? ಇದರಂತಿರುವುದೇ ವಸ್ತು ಸ್ವಭಾವ. ಈ ಶರೀರ ಪೋಷಣೆಗಾಗಿ ಉಳಿದ ಪದಾರ್ಥಗಳೆಲ್ಲಾ ವಿಶ್ವ ಕುಟುಂಬಿಯಾದ ಪರಮಾತ್ಮನದಲ್ಲದೆ ನಮ್ಮದಲ್ಲ ಎಂದು ದೃಢ ಮಾಡಬೇಕು: ಎಲ್ಲವೂ ನನ್ನದೇ ಎಂಬ ಸ್ವಾಭಿಮಾನವು ಬಂದರೆ ಎಷ್ಟು ವಸ್ತುಗಳಾದರೂ ಸಾಲದೇ ಬರುವುದು. ಇದರಿಂದ ಆ ಪದಾರ್ಥವು ಯಾರಿಗೆ ಅಗತ್ಯವೋ ಆ ಪ್ರಾಣಿಗೆ ತೊಂದರೆಯಾಗಬಹುದು. ಆ ಪ್ರಾಣಿಯ ಪರಿತಾಪವು ಪರಮಾತ್ಮನ ಪರಿತಾಪವೇ ಆಗುವುದು. ಅದಕ್ಕಾಗಿ ನಿಯಮಿತವಾದ ಪದಾರ್ಥವನ್ನು ನಾವು ಬಳಸಿದರೆ ಕಳ್ಳತನವೇ ಅಲ್ಲವೆ? ಹೀಗೆ ಒಬ್ಬರ ವಸ್ತುವನ್ನು ಮತ್ತೊಬ್ಬರು ಅಪೇಕ್ಷಿಸುವುದಕ್ಕೆ ಮಮಕಾರವೆಂದು ಹೇಳುವರು. ಈ ಮಮಕಾರದಿಂದಲೇ ಜನ್ಮವುಂಟಾಗುವುದು. ಜನ್ಮವು ಬಂದ ಮೇಲೆ ಅದರ ಆಟಗಳನ್ನು ಆಡಬೇಕಾದುದೇ ಶಿಕ್ಷೆ. ಈ ಶಿಕ್ಷೆಯನ್ನು ಅನುಭವಿಸುವಾಗ ತಾಪತ್ರಯಪಡುವುದರಿಂದ ಉಪಯೋಗವೇನು? ಈ ತಾಪತ್ರಯವು ಮತ್ತೆ ಮತ್ತೆ ಶಿಕ್ಷೆಯನ್ನೇ ಕೊಡುವುದಿಲ್ಲವೆ? ಶಿಕ್ಷೆಯಿಂದ ಮುಕ್ತನಾಗಬೇಕಾದುದು ಮಾನವ ಜೀವಿಯ ಕೆಲಸ."

" ಅಪ್ಪಾ ! ನಿನ್ನ ವಾಕ್ಯಾಮೃತಗಳು ನನ್ನ ಹೃದಯಾಗ್ನಿಯನ್ನು ಸಂತೈಸಿದುವು. ಇನ್ನು ನನ್ನ ಪ್ರಯಾಣವು ಸಿದ್ಧವಾಯಿತು. ನೀನು ಲೋಕೋತ್ತರವಾದ ಕೀರ್ತಿವಂತನಾಗುವೆ. ನಾನು ನಿನಗೆ ಯಾವ ವಿಚಾರವನ್ನೂ ಹೇಳಬೇಕಾಗಿಲ್ಲ."

ಹೀಗೆಂದು ಹೇಳುತ್ತಾ ಕೇಸನ ಮಂತ್ರಿಯು ಹರಿನಾಮ ಸ್ಮರಣೆಯಿಂದ ಭೌತಿಕ ದೇಹವನ್ನು ಬಿಟ್ಟನು. ಆತನಿಗೆ ನಡೆಯಬೇಕಾದ ಉತ್ತರ ಕ್ರಿಯೆಗಳು ಸಾಂಗವಾಗಿ ನೆರವೇರಿದುವು. ಇದರಿಂದ ಯಾರಿಗೂ ಪರಿತಾಪವಾಗದಂತೆ ಪೋತನಾಮಾತ್ಯನು ತನ್ನವರಿಗೆಲ್ಲಾ ಹಿತಬೋಧೆಯನ್ನು ಮಾಡುತ್ತಲೇ ಇದ್ದನು.

## ಪೋತನಾಮಾತ್ಯನ ಲೋಕಯಾತ್ರೆ

ಕೇಸನ ಮಂತ್ರಿಯ ನಿರ್ಯಾಣಾನಂತರ ತಿಪ್ಪರಾಜು, ಪೋತರಾಜು ಕೆಲವು ದಿನಗಳವರೆವಿಗೆ ಐಕಮತ್ಯದಲ್ಲಿದ್ದು ಬೇರೆಯಾದರು. ದರಿದ್ರ ದೇವತೆಯು ಪೋತ ನಾಮಾತ್ಯನ ಕೈ ಹಿಡಿದಳು. ಲಕ್ಷ್ಮಿಯೇ ಮನೆಯ ಆಳು. ಈ ದಂಪತಿಗಳಿಗೆ ಮಲ್ಲನನೆಂಬ ಮಗನೂ ಕಮಲೆಯೆಂಬ ಮಗಳೂ ಇದ್ದರು. ಸಾಲದುದಕ್ಕೆ ಭಾವ ಮೈದುನನ ಮಗಳಾದ ಶಾರದೆ. ಇಷ್ಟುಮಂದಿಗೆ ಮಲ್ಲನನ ಜೇಸಾಯವೇ ಜೀವನ. ಆದಕ್ಕೆ ಬಡಕಲು ಎತ್ತುಗಳು ಕೂಡಾ ಇಲ್ಲ. ಎಮ್ಮೆಗಳೆರಡು. ಮನೆಯಲ್ಲಿ ಕಲಿ ಯುಗ ಬ್ರಹ್ಮ ನಿರ್ಮಿತವಾದ ಪಾತ್ರೆಗಳು. ಆಭರಣಗಳನ್ನು ಸ್ವಪ್ನದಲ್ಲಿಯೂ ಕಾಣರು. ಅಹನ್ಯಹನಿ ಕಾಲಕ್ಷೇಪ. ಪೋತನನು ಕೋದಂಡರಾಮಸ್ವಾಮಿಯ ದೇವಾಲಯದಲ್ಲಿ ಭಜನೆ, ಪುರಾಣಕಾಲಕ್ಷೇಪ ಇಷ್ಟರಲ್ಲಿಯೇ ಇರುತ್ತಿದ್ದನು. ಈತ ನಿಗೆ ಸಂಸಾರ ತಾಪತ್ರಯವೇ ಇರಲಿಲ್ಲ. ಮಲ್ಲನನಿಗೆ ಹದಿನೆಂಟು ವಯಸ್ಸಾಗು ವವರೆಗೂ ಈ ತರದ ಕಾಲಕ್ಷೇಪವೇ! ಅವನಿಗೆ ಲಗ್ನವೊಂದಾಗಬೇಕು. ಯಾರು ಮಾಡುವರು? ಲಕ್ಷ್ಮಿಗೆ ಇದೊಂದು ವ್ಯಥೆ. ಶಾರದೆಯನ್ನು ಮಲ್ಲನನಿಗೆ ಕೊಡ ಬೇಕೆಂಬ ಬಯಕೆ. ಆಕೆಯು ಶ್ರೀನಾಥನ ಮಗಳು. ಶ್ರೀನಾಥನೆಂದರೆ ಸಾಮಾನ್ಯ ನಲ್ಲ. ರಾಜಕವಿ. ಆಸ್ಥಾನದಲ್ಲಿ ಈತನಿಗೆ ಮೊದಲನೆಯ ಪೀಠ. ರಾಜರ ಅರ್ಧಾ ಸನವೇ ಈತನದೆಂದಮೇಲೆ ಭೋಗಕ್ಕೇನು ಕಡಿಮೆ? ಧೊರೆಗಳಿಗೆ ಕವಿತ್ವವೆಂದರೆ ಪಂಚಪ್ರಾಣ. ಕವಿಗಳನ್ನು ಪ್ರತಿದಿನವೂ ಸಭೆ ಸೇರಿಸಿ ಸಮಸ್ಯೆಗಳನ್ನು ಇತ್ಯರ್ಥ ಮಾಡಿಸದಿದ್ದರೆ ಅರಸರ ಊಟವೇ ಆಗುತ್ತಿರಲಿಲ್ಲ. ಇದಕ್ಕೆ ಅವರ ರಸಜ್ಞತೆಯೇ ಮುಖ್ಯ ಕಾರಣ. ಹೀಗಿದ್ದವರಲ್ಲಿ ಸರ್ವಜ್ಞಸಿಂಗನ ಭೂಪಾಲನು ಮುಖ್ಯನು. ಶ್ರೀ ನಾಥನು ಒಂದುದಿನ ಪ್ರೌಢದೇವರಾಯರಲ್ಲಿಗೆ ಹೋಗಿ ರಾಜ ದರ್ಶನಕ್ಕಾಗಿ ಕೆಲವು ದಿನಗಳು ಕಾದು ಬೇಸರವಾಗಿ "ತಲ್ಲೀ ಕನ್ನಡ ರಾಜ್ಯಲಕ್ಷ್ಮಿ, ದಯಲೇದಾ ನೇನು ಶ್ರೀನಾಥುಡ" ಅಂದಿದ್ದಾನೆ. ಇದರಿಂದ ಈತನ ಠೀವಿಯು ಹೇಗಿತ್ತೆಂಬುದು ಗೊತ್ತಾಗುತ್ತದೆ. ಇಂತಹವನು ಪೋತನಾಮಾತ್ಯನ ಭಾವಮೈದ. ಹೇಗಿದೆ ದೈವ ಸಂಘಟನೆ! ಈತನ ಮಗಳಾದ ಶಾರದೆಗೆ ಮಲ್ಲನನಮೇಲೆ ಅಭಿಮಾನ. ಮಲ್ಲನನಿಗೆ ಶಾರದೆಯಲ್ಲಿ ಪ್ರೀತಿ. ಈ ದಾಂಪತ್ಯವನ್ನು ಕಣ್ಣಾರ ನೋಡುವ ಕುತೂಹಲ ಲಕ್ಷ್ಮಿಗೆ. ಶ್ರೀನಾಥನಿಗೂ ಸಂಬಂಧವೊಳ್ಳೆಯದೆಂದೇ ನಂಬುಗೆ. ಆದರೂ ದಾರಿದ್ರ್ಯ

ಕ್ಕಾಗಿ ಪರಿತಾಪ ! ಶಾರದೆಗೆ ಬಾಲ್ಯದಲ್ಲಿಯೇ ತಾಯಿಯು ತೀರಿಹೋಗಿ ಲಕ್ಷ್ಮಿಯ ಪೋಷಣೆಯಲ್ಲಿಯೇ ಇದ್ದಳು. ಕಮಲೆ ಶಾರದೆಯರಿಗೆ ಸ್ವಲ್ಪ ಹೆಚ್ಚುಕಡಿಮೆ ಒಂದೇ ವಯಸ್ಸು. ಕಿರಿಯ ಹೆಂಡತಿಯು ಮಗಳನ್ನು ಸರಿಯಾಗಿ ನೋಡಿಕೊಳ್ಳಲಾರಳೆಂದು ಶ್ರೀನಾಥನು ಅಕ್ಕನ ಬಳಿಯಲ್ಲಿ ಮಗಳನ್ನು ಬಿಟ್ಟಿದ್ದನು. ಅದು ಇಕ್ಕಟ್ಟಿಗೆ ಕಾರಣ ವಾಯಿತು. ಲಕ್ಷ್ಮಿಗೆ ಮಗಳು ಬೇರೆ ಸೊಸೆ ಬೇರೆ ಎಂಬ ಭಾವನೆಯೇ ಇರಲಿಲ್ಲ. ಮಲ್ಲನ ಬೇಸಾಯಗಾರ. ಬೇಸರವಿಲ್ಲದವನು. ತಂದೆಯ ಇಷ್ಟದಂತೆ ನಡೆಯುವ ಸ್ವಭಾವದವನು. ದಾರಿದ್ರ್ಯಕ್ಕಾಗಿ ಸ್ವಲ್ಪ ಪರಿತಾಪಪಡುವನು. ಹಿಂದೆಯೇ ದೈವ ಮಾಯೆಯಿಂದ ತಮ್ಮ ತೊಂದರೆಗಳು ಪರಿಹಾರವಾಗುತ್ತಿರುವುದನ್ನು ನೋಡಿ ಆನಂದ! ತಂದೆಯಲ್ಲಿರುವ ಮಹತ್ತರ ಗುಣಗಳಿಗಾಗಿ ಭಕ್ತಿ ಆಶ್ಚರ್ಯ ಹೀಗಿದ್ದನು. ಇಂತಹ ಪುತ್ರರತ್ನಗಳು ಸಿಕ್ಕಬೇಕಾದರೂ ಒಂದು ಅದೃಷ್ಟ ! ಆ ಅದೃಷ್ಟವು ಕೆಲವರಿಗೆ ಲಭ್ಯ ! ಪೋತನನ ಸಂಸಾರದಲ್ಲಿ ಯಾವ ವಿಧವಾದ ತೊಡಕುಗಳೂ ಇಲ್ಲವೆಂದೇ ಧಾರಾಳವಾಗಿ ಹೇಳಬಹುದಾದರೂ ಲಕ್ಷ್ಮಿಗೆ ಮಾತ್ರ ಆಗಾಗ ಮಗನ ಲಗ್ನದ ಕಡೆ ಮನಸ್ಸು ಎಳೆದು ಪರಿತಾಪವಾಗುತ್ತಿದ್ದಿತು. ಅದನ್ನು ಪರಿಹರಿಸುವರು ಯಾರು ?

ಭಗವಂತನ ಲೀಲೆಯು ಅವಾಙ್ಮಾನಸ ಗೋಚರವಾದುದು. ಶರೀರವು ಅಂತ ರಂಗದಲ್ಲಿರುವ ಒಂದು ಶಕ್ತಿಯ ಸಹಾಯದಿಂದ ನಡೆಯುತ್ತಿರುವುದು. ಈ ಶಕ್ತಿಯ ಮೊದಲನೆಯ ಆವರಣವೇ ಬುದ್ಧಿ. ಇದರಿಂದ ಹುಟ್ಟುವುದು ಕಾಮ. ಕಾಮ ವೆಂದರೆ ಇಷ್ಟವೆಂದು ಹೇಳುವುದು. ಅದು ಸ್ವೇಚ್ಛೆಯಾಗಿರುವುದೇ ಸ್ವಭಾವ. ಇದು ಲೋಕವೆಲ್ಲಾ ತನಗೆ ಆಗಬೇಕೆಂಬ ಭ್ರಾಂತಿಯನ್ನು ಹುಟ್ಟಿಸುತ್ತದೆ. ಎಲ್ಲ ವನ್ನೂ ಸ್ವಾಧೀನಪಡಿಸಿಕೊಳ್ಳಲು ಶರೀರವೆಂಬ ಯಂತ್ರದಿಂದ ಕೆಲಸಗಳನ್ನು ಮಾಡಿ ಸುತ್ತದೆ. ಅದು ಸಾಧ್ಯವೆ ? ಆ ಶರೀರಕ್ಕೆ ಸಾಧ್ಯವಾದಷ್ಟು ಕೆಲಸವನ್ನು ಮಾತ್ರ ಮಾಡಬಲ್ಲದು. ಅದನ್ನು ತಿಳಿದುಕೊಳ್ಳುವ ಸಾಮರ್ಥ್ಯವು ಬುದ್ಧಿಗೆಲ್ಲಿಂದ ಬರಬೇಕು ? ಆ ಶಕ್ತಿಯುಳ್ಳವನು ಆತ್ಮ. ಆತನು ಜಡನಾಗಿರುತ್ತಾ ತನ್ನ ಮುಖ್ಯ ಮಂತ್ರಿಯಾದ ಬುದ್ಧಿಯಿಂದ ಎಲ್ಲಾ ಆಟಗಳನ್ನೂ ಆಡಿಸುತ್ತಿರುತ್ತಾನೆ. ಸಹಸ್ರಾರವೆಂಬ ಹೃದಯ ಕಮಲದಲ್ಲಿ ಈತನ ವಾಸ; ಇದಕ್ಕೇ ವಿಷ್ಣುವು, ಕ್ಷೀರ ಸಾಗರಶಾಯಿಯೆಂದು ಹೇಳುವುದು. ಹೃದಯವು ಪರಿಶುದ್ಧವಾದರೆ, ಕ್ಷೀರಸಾಗರ ವಾಗುತ್ತದೆ. ಹಾಗೆ ಮಾಡಬೇಕಾದುದೇ ಮನುಷ್ಯ ಶರೀರಧಾರಿಯ ಮುಖ್ಯ ಕೆಲಸ. ಅದಕ್ಕಾಗಿ ಕಿತ್ತಾಡುವಾತನೇ ಯೋಗಿ. ನಶ್ವರನಾದ ಸುಖಗಳಿಗಾಗಿ ಬುದ್ಧಿಯು ಕುಣಿಸಿದಂತೆ ಕುಣಿಯುವನು ಭೋಗಿ. ಇವನು ಆಗಾಗ ತೊಂದರೆಗಳಿಗೆ ಸಿಕ್ಕುತ್ತಿರ ಬೇಕಾಗುತ್ತದೆ. ತೊಂದರೆಗೆ ಸಿಕ್ಕದಿರಬೇಕಾದರೆ ಯೋಗಿಯಾಗಬೇಕು. ಯೋಗ ಭೋಗಗಳ ದ್ವಂದ್ವ ಯುದ್ಧವೇ ಮನುಷ್ಯ ಶರೀರ ಯಾತ್ರೆಯ ಫಲ.

ಐಹಿಕಾಮುಷ್ಮಿಕ ತತ್ಪರನಾದ ಪೋತನಾಮಾತ್ಯನು ನಿತ್ಯ ತೃಪ್ತನಾಗಿ ತನ್ನ ನಿಯಮಿತ ಕಾರ್ಯಗಳನ್ನು ಉತ್ಸಾಹದಿಂದ ಮಾಡುತ್ತಿದ್ದನು. ಒಂದು ಚಂದ್ರಗ್ರಹಣ ಸಮಯದಲ್ಲಿ ಈತನಿಗೆ ಸಮೀಪದಲ್ಲಿರುವ ನದೀತೀರದಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಡಬೇಕೆಂದು ಆಸೆಯಾಯಿತು. ಮನೆಯಿಂದ ಹೊರಕ್ಕೆ ಹೊರಡುತ್ತಲೇ ಶುಭ ಸೂಚನೆಗಳು ಕಂಡುಬಂದು ಆನಂದಪೂರಿತ ಮನಸ್ಕನಾದನು. ತಾನು ಮೊದಲ ನೆಯ ದಿನ ವಿವರಿಸಿದ್ದ ಧೃವ ಚರಿತ್ರೆಯ ವಿಷಯವು ಮನಸ್ಸಿಗೆ ಬಂದಿತು. ಶಂಖ ಚಕ್ರ ಗದಾಧಾರಿಯಾದ ಮಹಾವಿಷ್ಣುವು ಐದುವರ್ಷದ ಹುಡುಗನಿಗೆ ಸಾಕ್ಷಾತ್ಕಾರ ವಾದುದು ಪ್ರತಿಬಿಂಬಿಸಿದಂತಿದ್ದಿತು. ಪರಿಶುದ್ಧವಾದ ಹೃದಯವುಳ್ಳ ಆತನು, ಮಹಾ ವಿಷ್ಣುವಿನ ಲೀಲೆಯನ್ನೇ ನೆನೆಯುತ್ತಾ ಬರುತ್ತಿರಲು, ಸಾಯಂಕಾಲವಾ ಗುತ್ತಾ ಬಂದಿತು. ಆಗ ಸಮೀಪವಾಗಿದ್ದ ನದಿಯ ತೀರವು ಅತ್ಯಂತ ರಮಣೀಯ ವಾಗಿ ಆಯಾಸಗೊಂಡವರನ್ನು ಉಪಚರಿಸುವುದೋ ಎಂಬಂತೆ ಮಂದಮಾರುತ ದಿಂದ ಪ್ರಕಾಶಿಸುತ್ತಿತ್ತು. ನಿಶಿಯೆಂಬ ಕಾಮಿನಿಯು ಧರಿಸಿರುವ ಆಕಾಶವೆಂಬ ಪದಕದ ಮುತ್ತುಗಳೋ ಎಂಬಂತೆ ನಕ್ಷತ್ರಗಳು ಶೋಭಾಯಮಾನವಾಗಿದ್ದುವು. ಮಹಾಮಹಿಮನಾದ ಪೋತನಾಮಾತ್ಯನ ಜನ್ಮವು ಇದರೊಂದಿಗೆ ಸಾರ್ಥಕವಾಯಿ ತೆಂದು ದೇವತೆಗಳು ಪುಷ್ಪವೃಷ್ಟಿಯನ್ನು ಸುರಿಸುತ್ತಿರುವರೋ ಎಂಬಂತೆ ಎಲ್ಲಿ ನೋಡಿದರಲ್ಲಿ ಬಿಳಿಯ ಬಣ್ಣದ ತಾರೆಗಳು 'ಪೋತನಾ, ಬಂದೆಯಾ,' ಬಾ ಬಾ! ಎಂದು ಮಂದಹಾಸದಿಂದ ಕರೆಯುತ್ತಿರುವಂತೆ ಮನೋಹರನಾದ ಚಂದ್ರನ ಪ್ರಕಾಶ! ಇದೆಲ್ಲಾ ಪೋತನಾಮಾತ್ಯನ ಆನಂದವನ್ನು ಸೂರ್ಮಡಿಸುತ್ತಿತ್ತು. ಈ ವೈಭವಗಳ ನ್ನೆಲ್ಲಾ ನೋಡಿ ಆನಂದ ಭಕ್ತಿ ಭರಿತನಾದ ಪೋತನನು, "ಕೋದಂಡರಾಮಾ! ದಯಾನಿಧೇ! ಕೋದಂಡರಾಮಾ!" ಅನ್ನುತ್ತಿದ್ದನು. ಕಣ್ಣುಗಳಲ್ಲಿ ಆನಂದ ಬಾಷ್ಪಗಳು ಮುತ್ತುಗಳಂತೆ ಉದುರುತ್ತಿದ್ದುವು. ನದಿಯ ಬಳಿಗೆ ಬಂದು ಪ್ರದಕ್ಷಿಣೆ ನಮಸ್ಕಾರವನ್ನು ಮಾಡಿ, "ಪರಮಪಾವನೇ! ಮಲಾಪಹಾರೀ! ಗೋದಾವರೀ!" ಎಂದನು. ಅಷ್ಟರಲ್ಲಿ ಕತ್ತಲು ಕವಿಯುತ್ತಾ ಬರಲು ಗ್ರಹಣವು ಹಿಡಿಯುತೆಂದು ಆತುರ ಆತುರವಾಗಿ ಸ್ನಾನ ಮಾಡುತ್ತಾ "ಗೋವಿಂದೇತಿ ಸದಾ ಸ್ನಾನಂ ಗೋವಿಂ ದೇತಿ ಸದಾ ಜಪಂ | ಗೋವಿಂದೇತಿ ಸದಾ ಧ್ಯಾನಂ ಸದಾ ಗೋವಿಂದ ಕೀರ್ತನಂ ||" ಎಂದನು. ಈ ಅಕ್ಷರಗಳು ಆತನ ಬಾಯಿಂದ ಹೊರಟುವೇ ತಡ; ನದಿಯ ದಡದಲ್ಲಿ ಕಾವಿಯ ಬಟ್ಟೆ ವಿಭೂತಿಯ ಶೃಂಗಾರ! ರುದ್ರಾಕ್ಷಗಳ ಹಾರ! ಹಸನ್ಮುಖದ ವೈಯಾರ! ಮೃದುವಾದ ಶರೀರ! ಮೃದುವಾತೆಯಿಂದ ಶೋಭಾಯಮಾನನಾದ ಮೂವತ್ತು ವರ್ಷಗಳ ವ್ಯಕ್ತಿಯು ಪ್ರತ್ಯಕ್ಷನಾದನು. ಭಕ್ತಜನ ಪೂಜಾ ನಿರತನಾದ ಪೋತನಾಮಾತ್ಯನು ತಕ್ಷಣವೇ ನೀರಿನಿಂದ ಹೊರಕ್ಕೆ ಬಂದು ಆ ವ್ಯಕ್ತಿಯ ಪಾದ ಗಳೆರಡನ್ನೂ ಹಿಡಿದು ಸಾಷ್ಟಾಂಗ ನಮಸ್ಕಾರ ಮಾಡಿ ಮೇಲಕ್ಕೆದ್ದು ಅಂಜಲಿಬದ್ಧ

ನಾಗಿ "ಮಹಾತ್ಮಾ! ತಮ್ಮ ದರ್ಶನದಿಂದ ಈ ಜನ್ಮವು ಸಾರ್ಥಕವಾಯಿತು. ಇಂತಹ ಭಾಗ್ಯವು ಅಲಭ್ಯವು".

"ಪೋತನಾ! ಯಾವ ಜನ್ಮವು ಸಾರ್ಥಕವನ್ನು ಹೊಂದಬೇಕೋ ಅದಕ್ಕೇ ಈ ಆನಂದ. ಇಷ್ಟಕ್ಕೆ ಯೋಚನೆಯೇ"

"ಯೋಗ್ಯ ಕಾರ್ಯಗಳಲ್ಲಿ ಆತ್ಮಾನಂದವು ಉಕ್ಕುವುದು ಸ್ವಭಾವವೇ ಅಲ್ಲವೇ?"

"ಅದರಿಂದಲೇ ಸಗುಣಾರಾಧನೆಯು ಒಳ್ಳೆಯದೆಂದು ಜೀವನ್ಮುಕ್ತಿ ರೂಪಕ ಕಂಠದಿಂದ ಹೇಳುವುದು"

"ಸಗುಣೋಪಾಸಕರಿಗೆ ಜನ್ಮವಿರುವುದೆಂದು ಕೆಲವರು ಹೇಳುವರು. ಔಪಾಸನಾನಂದವೂ ಒಂದು ತೆರೆಯೆಂದೂ ಒಳ್ಳೆಯದು ಕೆಟ್ಟುದು ಎಂಬ ಭೇದರಾಹಿತ್ಯವಾದಲ್ಲದೆ ಜೀವನ್ಮುಕ್ತನಾಗಲಾರನೆಂದೂ ಅವರ ವಾದ".

"ಇದು ಶುಷ್ಕ ವೇದಾಂತ. ಸಗುಣೋಪಾಸನೆಯು ಶರೀರ ಸಂಬಂಧವಾದದ್ದು. ನಿರ್ಗುಣವು ಆತ್ಮ ಸಂಬಂಧ. ಅಂತರ್ಬಾಹ್ಯಗಳಲ್ಲಿಯೂ ಪರಿಶುದ್ಧನಾದಲ್ಲದೆ ಜೀವನ್ಮುಕ್ತಿಯೆಂಬದೇನು? ಶರೀರವನ್ನು ಸೋಮಾರಿತನದಿಂದ ಬೆಳೆಸಿ ಅಂತರ್ಮುಖಿಗಳಾಗುತ್ತೇವೆಂದು ನಟಿಸಿ, ಯಾವ ದಾರಿಯನ್ನೂ ನಂಬದಿರುವ ನಾಸ್ತಿಕರು ಹೀಗೆ ಹೇಳುವುವೇನೋ ನಿಜ! ಆನಂದಕ್ಕೆ ಆಶ್ರಯವಾದ ಶರೀರವು ಸುಷುಪ್ತಾವಸ್ಥೆಯನ್ನು ತ[illegible]ನವರಿಗೂ ಜಾಗ್ರದಾವಸ್ಥೆಯಲ್ಲಿ ಲೋಕನೆಲ್ಲಾ ಇರುವುದಿಲ್ಲವೆ? ಜಾಗ್ರತ್ತಿನಲ್ಲಿ ಕಲಸ ಮಾಡುತ್ತಾ ಸುಷುಪ್ತಾವಸ್ಥೆಯ ಅನುಭವವನ್ನು ಹೇಳುವವರು ಹುಲಿಯನ್ನು ನೋಡಿ ನರಿಯು ಬರೆಗಳನ್ನು ಹಾಕಿಕೊಂಡಂತಾಗುವದು. ಸ್ಥೂಲ ಶರೀರವು ತನ್ನ ನಿಯಮಿತ ಕಾರ್ಯಗಳನ್ನು ಮಾಡಲು ಜುಗುಪ್ಸೆಯನ್ನು ಹೊಂದಿದರೆ, ಅಪಾರವಾದ ಮೋಕ್ಷ ಸಾಮ್ರಾಜ್ಯದಲ್ಲಿರಲು ಆತ್ಮನಿಗೆ ಅನುಕೂಲಗಳನ್ನು ಮಾಡುವುದು ನಿಜವೆ? ಈ ಗೂಡನ್ನು ಆಶ್ರಯಿಸಿರುವ ಆತ್ಮನು ಇದರ ಸಹಾಯವಿಲ್ಲದೆಯೇ ಎಲ್ಲಿಗೆ ಹಾರಬಲ್ಲನು? ಇವೆರಡರ ಪರಸ್ಪರ ಸಂಬಂಧವು ತಪ್ಪಿದರೆ ಮತ್ತೆ ಜನ್ಮವೆಂದೇ ಕಿತ್ತಾಡುವರಲ್ಲಾ! ಇದರಿಂದ ಮನುಷ್ಯ ಶರೀರಧಾರಿಯು ಈ ಜನ್ಮದಲ್ಲಿಯೇ ಜನ್ಮರಾಹಿತ್ಯವನ್ನು ಪಡೆಯಬೇಕೆಂದು ನಿರ್ಧರವಾಗುವುದು. ಹಾಗಾಗಲು ಜೀವಾತ್ಮಪರಮಾತ್ಮರ ಐಕ್ಯಾನುಸಂಧಾನವು ಅಗತ್ಯ. ಅದಾಗಬೇಕಾದರೆ ಶರೀರಾಭಿಮಾನಿಯಾದ ಜೀವಾತ್ಮನು, ತನ್ನ ಭೋಗ ವಸ್ತುವಿನಲ್ಲಿರುವ ಕಲ್ಮಷವನ್ನು ಮೊದಲು ತೊಳೆದು ಅನುಭವ ಮಾಡಿಕೊಂಡನಂತರ ಅಂತರದ ಕಲ್ಮಷಗಳನ್ನು ತೊಳೆಯಬೇಕು. ಈ ವಿಧವಾದ ಬಾಹ್ಯ ಶುಚಿಯ ಅನುಭವವೇ ಸಗುಣಾರಾಧನೆ. ಇದರಿಂದಾಗುವ ಆನಂದದಲ್ಲಿ ಶರೀರವನ್ನು ಮರೆಯುವುದೇ ನಿಜವಾದ ಆನಂದಸ್ವರೂಪ. ಇದನ್ನು ದೃಢಮಾಡಿಕೊಳ್ಳುವಿಕೆಯೇ ಜನ್ಮರಾಹಿತ್ಯ."

"ಸಗುಣಾರಾಧನೆಯೂ ಒಂದು ವಿಧವಾದ ಭ್ರಾಂತಿಯೇ ಅಲ್ಲವೆ? ಇದು ಜನ್ಮಕ್ಕೆ ಮೂಲವಾಗುವುದಿಲ್ಲವೆ?"

"ಕುಂಭಕಾರನೇ ಗಡಿಗೆಗಳನ್ನು ಮಾಡುತ್ತಾನೆ. ಅದನ್ನು ಹಸಿದಾಗಿರುವಾಗ ಬಳಸಿದರೆ ಉಳಿಯುವುದೆ? ಉಳಿಯುವುದಕ್ಕೇ ಅಲ್ಲವೆ ಆತನು ಸಂಸ್ಕಾರ ಮಾಡುವುದು? ಸಂಸ್ಕಾರವಾದ ಘಟವು ಬಳಸಿದರೆ ಅಪಾಯಕ್ಕೆ ಸಿಕ್ಕುವುದಿಲ್ಲ. ಒಂದು ವೇಳೆ ಸಿಕ್ಕಿ ಒಡೆದರೆ ಮತ್ತೆ ಪಾತ್ರೆಯಾಗುವುದೂ ಇಲ್ಲ. ಸಂಸ್ಕಾರವಿಲ್ಲದ ಘಟವು ಜಾಗ್ರತೆ ಒಡೆದು ಮತ್ತೆ ಪಾತ್ರೆಯನ್ನು ಮಾಡುವುದಕ್ಕೆ ಅನುಕೂಲವಾಗುವುದು. ಬ್ರಹ್ಮನಿರ್ಮಿತವಾದ ಘಟವೂ ಸಂಸ್ಕಾರಾನಂತರ ಒಡೆದರೂ ಮತ್ತೆ ಘಟವಾಗುವುದಿಲ್ಲ. ಈ ಸಂಸ್ಕಾರದ ಮೂಲ ಮಂತ್ರವೇ ಸಗುಣಾರಾಧನೆ. ಆ ಆನಂದವನ್ನು ಶಾಶ್ವತಪಡಿಸಿಕೊಳ್ಳುವಿಕೆಯೇ ಆತ್ಮಾನಂದದ ಸಂಸ್ಕಾರ!"

"ಆನಂದೋಸ್ಮಿ! ಮಹಾತ್ಮಾ! ತಾವು ಪಕ್ವ ಯೋಗಾಭ್ಯಾಸಗಳು. ಈ ಘಟವು ಹೇಗೆ ಶುದ್ಧವಾಗಬೇಕೆಂದು ವಿಧಿಸಿ."

"ಅದನ್ನು ತಿಳಿಸುವುದಕ್ಕಾಗಿಯೇ ಬಂದಿದ್ದೇನೆ. ಪೋತನಾ! ನೀನು ಜನ್ಮರಹಿತನಾಗಲು ಅವತರಿಸಿದ್ದೀಯೆ. ನಿನ್ನಿಂದ ಕಲಿಯುಗವೇ ಪಾವನವಾಗಬೇಕಾಗಿರುವುದು. ವ್ಯಾಸಪ್ರೋಕ್ತವಾಗಿರುವ ಮಹಾಭಾಗವತವನ್ನು ಆಂಧ್ರ ಭಾಷೆಯಲ್ಲಿ ಬರೆ. ಅದಕ್ಕಿಂತಲೂ ಈ ಘಟಕ್ಕೆ ಶ್ಲಾಘ್ಯವಾದ ಕಾರ್ಯವೇ ಇಲ್ಲವೆಂದು ನಂಬು. ಜನ್ಮರಾಹಿತ್ಯಕ್ಕೆ ಗುರುವಾದ ಭಾಗವತ ರಹಸ್ಯಗಳು ಲೋಕಕ್ಕೆ ಅಗ್ರಾಹ್ಯವಾಗಿರುವುವು. ಅದಕ್ಕೆ ಕವಿದಿರುವ ಅಂಧಕಾರಕ್ಕೆ ದೀಪವನ್ನು ಹಚ್ಚು; ಪ್ರಕಾಶಮಾನವಾಗಲಿ. ಅದು ಲೋಕದಲ್ಲಿ ತೊಳಗುವಷ್ಟು ದಿನವೂ ನಿನ್ನ ಆತ್ಮಾನಂದಕ್ಕೆ ಮೇರೆಯುಂಟೆ? ಗ್ರಂಥ ಪಠನೆಯು ನಡೆಯುವಾಗಲೆಲ್ಲಾ ನಿನ್ನನ್ನೂ ಆಹ್ವಾನಿಸದೆ ಇರುವುದಿಲ್ಲ. ಸಭಿಕರೆಲ್ಲರ ಅಂತರ್ಗತನಾಗಿ ನಿಲ್ಲುವ ನಿನ್ನ ಆನಂದವು ಆಚಂದ್ರಾರ್ಕವಾಗಿರುವುದು"

"ಆ ಗ್ರಂಥವನ್ನು ಹೇಳುವ ಸಾಮರ್ಥ್ಯವು ಈ ಪಾರ್ಥಿವ ದೇಹಕ್ಕಿದೆಯೆ?"

"ನಿನ್ನ ಆರಾಧನಾದೈವವಾದ ಕೋದಂಡರಾಮನು ಎಲ್ಲವನ್ನೂ ನಿನಗೆ ತಿಳಿಸುವನು. ಗುರುವಾಕ್ಯವು ಅನುಲ್ಲಂಘನೀಯವೆಂದು ನಂಬು."

"ಧನ್ಯೋಸ್ಮಿ" ಎಂದು ಹೇಳುತ್ತಾ ಮತ್ತೆ ಆತನ ಪಾದಗಳಿಗೆ ನಮಸ್ಕಾರ ಮಾಡಿ ಮೇಲಕ್ಕೇಳುವಷ್ಟರಲ್ಲಿಯೇ ಆ ವ್ಯಕ್ತಿಯು ಮತ್ತೆ ಅಗೋಚರ. ಇದೊಂದು ಸ್ವಪ್ನ ವ್ಯಾಪಾರದಂತಾಯಿತು. ಪರಿಶುದ್ಧ ಹೃದಯದಿಂದ ಪಿತೃ ತರ್ಪಣವನ್ನು ತೀರಿಸಿ, ರಾಮಧ್ಯಾನವನ್ನು ಮಾಡುತ್ತಾ ಮನೆಗೆ ಬಂದನು. ಅಂದಿನಿಂದ ಆತನ ಚರ್ಯೆಗಳೇ ಬೇರೆಯಾದುವು.

ಹಸನ್ಮುಖ! ನಿರ್ಮಲವಾದ ಹೃದಯವನ್ನು ಲೋಕಕ್ಕೆ ತೋರಿಸುವ ಮಧುರ ವಾದ ವಾಣಿ! ಕೋದಂಡರಾಮಸ್ವಾಮಿಯು ಪ್ರತ್ಯಕ್ಷವಾಗಿ ಬೋಧಿಸುತ್ತಿರುವಂತೆ ಪುರಾಣದ ಇಂಪು, ಭಜನೆಯ ಆನಂದಸಾಗರ; ಹೀಗೆ ಪೋತನಾಮಾತ್ಯನು ಪ್ರಕಾಶಿ ಸುತ್ತಿದ್ದನು. ಗುರುವಿನ ಆಜ್ಞೆಯಂತೆ ಆಂಧ್ರ ಭಾಗವತವನ್ನು ಬರೆಯಲು ಒಂದು ಶುಭ ಮುಹೂರ್ತವನ್ನು ಗೊತ್ತುಮಾಡಿ ಆನಂದದಿಂದ ದೇವರ ಪೂಜೆಯನ್ನು ತೀರಿಸಿ, ಒಂದು ತಾಳೆಯ ಪುಸ್ತಕವನ್ನೂ ಘಂಟವನ್ನೂ ದೇವರ ಮುಂದಿಟ್ಟು ನಿವೇದನೆ ಮಾಡಿ, ದೇವರಿಗೆ ಮಂಗಳಾರತಿಯನ್ನು ಮಾಡಿ ಪ್ರದಕ್ಷಿಣೆ ನಮಸ್ಕಾರವನ್ನೂ ಮಾಡಿದನಂತರ, ಆನಂದವದನಾರವಿಂದದಿಂದ ಕೈಗೆ ಘಂಟವನ್ನು ತೆಗೆದುಕೊಂಡು ಸಲಸಲಕ್ಕೂ ಶ್ರೀರಾಮ ಧ್ಯಾನವನ್ನೂ ಮಾಡುತ್ತಾ ಪುಸ್ತಕವನ್ನು ಬರೆಯಲಾರಂಭಿಸಿ,

ನುಡಿದಪುದು ಭಾಗವತಮೆನೆ । ನುಡಿಸುವನಾ ರಾಮಭದ್ರನುರ್ವಿಯೊಳಿದನಾ ॥
ನುಡಿದೊಡೆ ಭವಭಯಹರಮೆನೆ । ನುಡಿದಪೆ ಮತ್ತೊಂದು ಗಾಥೆ ನುಡಿಯಲದೇಕೋ ॥

ಗುಣವೆನಲು ಕೆಲವರಾಂಧ್ರವ । ಗುಣ ಸಂಸ್ಕೃತವೆಂದು ಕೆಲರು ಗುಣಿಸಲಿಕೆಲ್ಲಾ ॥
ಗುಣಯುತರ ತಣಿಪ ಭಾವವ । ನಣಗಿಸುತೀಕಬ್ಬ ಮೊರೆವೆ ನಾನಾವಿಧದಿಂ ॥

ಎಂಬ ತಾತ್ಪರ್ಯವನ್ನು ಕೊಡುವ ಎರಡು ಆಂಧ್ರ ಪದ್ಯಗಳನ್ನು ಬರೆದನು. ಅದನ್ನು ಓದಿ ಓದಿ ಆನಂದಿಸುವನು. "ಆಹಾ! ರಾಮಚಂದ್ರಾ! ನಿನ್ನ ಅಭಿ ಮಾನವು ಸ್ತೋತ್ರಾರ್ಹವಾದುದು. ಕರುಣಾನಿಧಿಯೆಂಬ ಬಿರುದು ನಿನಗಲ್ಲದೆ ಯಾರಿಗೆ ಸಲ್ಲುವುದು ?" ಎಂದು ಗದ್ಗದ ಕಂಠನಾಗುವನು. ಸಂಸಾರ ತಾಪತ್ರಯವೂ ಶರೀರಾಭಿಮಾನವೂ ಅಂದಿನಿಂದಲೇ ಕಡಿಮೆಯಾದುವು. ಇದಲ್ಲವೆ ? ಶ್ರೀರಾಮ ಚಂದ್ರಮೂರ್ತಿಯ ಲೀಲೆ!

ಪೋತನಾಮಾತ್ಯನು ಭಾಗವತಾರಂಭದಲ್ಲಿ ಶ್ರೀರಾಮನನ್ನುದ್ದೇಶಿಸಿ "ಪರ ಮಾತ್ಮಾ! ದಯಾನಿಧೇ! ಕರ್ಮ ಫಲಾನುಭವಕ್ಕಾಗಿ ಬಂದಿರುವ ಈ ಶರೀರದಲ್ಲಿರುವ ನಿನ್ನಬಂದು ಹೋಗುವಿಕೆಯನ್ನು ತಪ್ಪಿಸಿ ಮೋಕ್ಷ ಸಾಮ್ರಾಜ್ಯವನ್ನು ಪಡೆಯುವ ಕುತೂ ಹಲದಿಂದ ಗುರೂಪದೇಶದಂತೆ ಈ ಸದ್ಗ್ರಂಥವನ್ನು ಬರೆಯಲು ಮೊದಲು ಮಾಡು ವೆನು. ಇದಕ್ಕೆ ಕರ್ತನೂ ಭೋಕ್ತನೂ ನೀನೇ! ಗ್ರಂಥವೇ ನಿನ್ನದು. ಬರೆಯು ಲಿರುವ ಶರೀರವು ಕಾರಣವಾದ ಒಂದು ಯಂತ್ರವು. ರಾಮಾ! ಆಪದ್ಬಾಂಧವಾ! ಅಮೋಘವಾದ ಈ ಸೇವಾ ಸಾಮ್ರಾಜ್ಯದಲ್ಲಿ ಏನು ತೊಡಕುಗಳು ಬಂದರೂ ಶರೀರವೇ ಶಿಥಿಲವಾದರೂ ದೋಷವು ನಿನ್ನದೇ! ನೀನು ಹೇಳಿದ ವಿಷಯಗಳನ್ನು ಮಾತ್ರ ಬರೆಯುವೆನು. ಗ್ರಂಥದಲ್ಲಿರುವ ಭಾವಾರ್ಥಗಳೂ ರಸಗಳೂ ಅಭಿನಂದನೀಯ ವಾಗುವಂತೆ ಮಾಡಿ ಶರೀರಾಭಿಮಾನವನ್ನು ದೂರಮಾಡು. ಇದರಲ್ಲಿ ಅಣು ಮಾತ್ರವೂ ನನಗೆ ಸ್ವಾರ್ಥ ಬುದ್ಧಿಯನ್ನು ಕೊಡಬೇಡ. ಕರುಣಾಕರಾ! ಸರ್ವ

ಜ್ಞನೂ ಸರ್ವಶಕ್ತನೂ ಆದ ನೀನರಿಯದ ವಿಷಯಗಳೇ ಲೋಕದಲ್ಲಿಲ್ಲ. ಹೆಚ್ಚಾಗಿ ಹೇಳಿದರೆ ಉಪಚಾರವಾಗುತ್ತದೆ. ಅದಕ್ಕೆ ನೀನು ಮರುಳಾಗತಕ್ಕವನಲ್ಲ. ಹೆಂಡತಿಯೇ ತನ್ನ ನಿಜತ್ವವನ್ನು ಹೇಳಿದರೂ ಪ್ರಾಯೋಪವೇಶವನ್ನು ಮಾಡಿಸಿದೆ. ಹೀಗಿರುವಾಗ ನಿನ್ನನ್ನು ಮೆಚ್ಚಿಸುವರು ಯಾರು ? ಗ್ರಂಥಕ್ಕೆ ಆರಂಭಿಸುವೆನು. ಸಂಸಾರದಿಂದಾಗಲಿ ಇತರ ವಿಧಗಳಿಂದಾಗಲಿ ತೊಂದರೆಗಳುಂಟಾಗದಂತೆ ಕಾಪಾಡುವ ಭಾರವು ನಿನ್ನದು " ಎಂದು ಮತ್ತೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.

ಗ್ರಂಥರಚನೆಯು ನಿರ್ವಿಘ್ನವಾಗಿ ನಡೆಯುತ್ತಿದ್ದಿತು. ಪುರಾಣವು ನಿಲುಕಡೆಯಿಲ್ಲದಂತೆ ಜನಾದರಣೀಯವಾಗಿ ನಡೆಯುತ್ತಲೇ ಇದ್ದಿತು. ಕೆಲವು ದಿನಗಳನಂತರ ತಾನು ಬರೆಯುತ್ತಿರುವ ಭಾಗವತವನ್ನೇ ಪುರಾಣ ಹೇಳಲು ಮೊದಲು ಮಾಡಿದನು. ಪೋತನನ ಸಂಸಾರದವರು ಪುರಾಣ ಶ್ರವಣದಿಂದ ಐಹಿಕ ಸುಖಗಳ ಅಪೇಕ್ಷೆಯನ್ನು ದೂರಮಾಡುತ್ತಾ ಬಂದರು. ಆದರೂ ಆಗಾಗ ಮಾಯಾವರಣಗಳು ತೆರೆಗಳಂತೆ ಬರುತ್ತಿದ್ದುವು. ಲಕ್ಷ್ಮಿಗೆ (ಐಶ್ವರ್ಯಕ್ಕೆ) ಪೋತನನ ಮನೆಯಲ್ಲಿ ನಿಲ್ಲಲು ಅವಕಾಶವೇ ಆಗಲಿಲ್ಲ. ಸಂಪೂರ್ಣ ಛಿದ್ರವಾದ ಹುಲ್ಲು ಗುಡಿಸಿಲಿನ ವಾಸ ! ಅದರಲ್ಲಿ ತೇಜೋಮಯವಾದ ಕೋದಂಡರಾಮಸ್ವಾಮಿಯ ವಿಗ್ರಹಗಳು ! ಅವುಗಳನ್ನು ನೋಡಲು ಜನಸಂದಣಿ! ಅವರನ್ನು ಉಪಚರಿಸುವುದಕ್ಕೆ ಕೂಡಾ ಯತ್ನವಿಲ್ಲದ ಸ್ಥಿತಿ. ಇದನ್ನು ಕಂಡ ಕರುಣಾಶಾಲಿಗಳು ಸಹಾಯ ಮಾಡಬಂದರೆ ಅದರಲ್ಲಿ ತಿರಸ್ಕಾರ ! ಮಲ್ಲನನ ಆರಂಬದಿಂದ ಸಿಕ್ಕುವ ಧಾನ್ಯವೇ ಆಹಾರ! ಅಷ್ಟಲ್ಲದೆ ಮತ್ತೆ ಯಾವ ಐಶ್ವರ್ಯವೂ ಇಲ್ಲ. ಅವನ್ನು ಆತನು ಅಪೇಕ್ಷಿಸುತ್ತಲೂ ಇರಲಿಲ್ಲ. ಭಾಗವತ ರಚನೆ, ಪುರಾಣ ಕಥನವು ನೈಮಿತ್ತಿಕ ಕರ್ಮದಂತಾಯಿತು. ಭಾಗವತ ಪುರಾಣವನ್ನು ಕೇಳಲು ಅನೇಕರು ಸೇರಿ ಆ ಗ್ರಂಥದ ಸ್ವಾರಸ್ಯವನ್ನು ಹೇಳಿಕೊಳ್ಳುತ್ತಾ ಬಂದರು. ಇದು ಕರ್ಣಾಕರ್ಣಿಯಾಗಿ ಸಿಂಗನ ಭೂಪಾಲನಿಗೂ ತಿಳಿಯಿತು. ಆತನು ವಿಷಯವನ್ನು ಶ್ರೀನಾಥನಿಗೆ ತಿಳಿಸಿದನು. ಶ್ರೀನಾಥನು ಆಶ್ಚರ್ಯಚಕಿತನಾಗಿ ಪೋತನ ಭಾಗವತವನ್ನು ಬರೆಯುವುದೆಂದರೆ ನರಿಯು ನಾಗಲೋಕಕ್ಕೆ ಹೋದಂತೆಯೇ! ಇರುವುದು ಹಳ್ಳಿಯಲ್ಲಿ. ಸಹಪಾಠಿಗಳು ಕಾವ್ಯವನ್ನೇ ಅರಿಯದ ಮೂಢರು. ಅವರ ಕವಿತೆಗಳೆಲ್ಲಾ ನಿಸ್ಸಾರವಾದ ದೀವಳಿಗೆ ಪದಗಳು ! ಕೋಲಾಟದ ಪದಗಳು ! ಮಹಾನವಮಿ ಪದಗಳು ! ಒಂದು ಭೋಗಿನೀದಂಡಕವನ್ನು ಮಾತ್ರ ಹೇಳಿದ್ದಾನೆಂದು ಕೇಳಿದ್ದೇನೆ. ಅದೂ ಮನೆಯಿಂದ ಹೊರಗೆ ಬರುವ ಗ್ರಂಥವಲ್ಲ. ಕವಿತಾಸಾಗರದಲ್ಲಿ ಈಜಾಡುತ್ತಿರುವ ನಾವೇ ಒಂದು ಗ್ರಂಥವನ್ನು ಬರೆಯಲಾಗಲಿಲ್ಲ. 'ನಿರಂಕುಶಾಃ ಕವಯಃ' ಎಂದಲ್ಲವೇ ಇರುವುದು. ಕವಿಗೆ ಬೇಕಾದುದು ತಾಪತ್ರಯವಿಲ್ಲದ ಊಟ ; ಯೋಚನೆಯಿಲ್ಲದ ನಿದ್ರೆ. ಇಷ್ಟಕ್ಕೇ ಅವನಿಗೆ ಶೂನ್ಯ. ಇನ್ನು ಗ್ರಂಥವೇನು ಬಂತು ? ಗಂಧವೇ ಅವನಿಗೆ ಎಂದು ತಿರಸ್ಕಾರವನ್ನು ಸೂಚಿಸಿ

ರಾಜನ ಮನಸ್ಸನ್ನು ಮರಳಿಸಿದನು. ಆದರೂ ಒಂದುದಿನ ಹೋಗಿ ನೋಡಿಕೊಂಡು ಬರುತ್ತೇನೆಂದೂ ಹೇಳಿದನು. ರಾಜ ಕವಿಯಾದ ಈತನಿಗೆ ಒಂದೆರಡು ದಿನಗಳಲ್ಲಿಯೇ ಅದು ಮರೆತೇಹೋಯಿತು.

ನಿತ್ಯ ದರಿದ್ರನಾದ ಪೋತನಾಮಾತ್ಯನು ತನ್ನ ವೃತ್ತಿಯಲ್ಲಿ ನಿಯಮ ಬದ್ಧನಾಗಿದ್ದನು. ಇವನ ದಾರ್ಢ್ಯವನ್ನು ಕಂಡ ಕೋದಂಡರಾಮಸ್ವಾಮಿಯು ಭಕ್ತನಿಗೆ ಏನಾದರೂ ಸಹಾಯ ಮಾಡಬೇಕು. ಇಲ್ಲವಾದರೆ 'ಅನನ್ಯಾಶ್ಚಿಂತಯಂತೋಮಾಂ ಯೇಜನಾಃ ಪರ್ಯುಪಾಸತೇ । ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ" ಎಂಬ ವಾಕ್ಯವು ಸಾರ್ಥಕವಾಗುವುದೆ ? ಹಾಗೆಂದು ನಾನು ಸಿಕ್ಕಿದವರಿಗೆಲ್ಲಾ ಸಹಾಯ ಮಾಡುತ್ತಾ ಬಂದರೆ ಎಲ್ಲರೂ ಜಡರಾಗುವುದಿಲ್ಲವೆ ? ಐಶ್ವರ್ಯಮದದಿಂದ ಯುಕ್ತಾಯುಕ್ತ ವಿವೇಚನೆ, ದೈವಭಕ್ತಿ, ದಾನ, ಧರ್ಮ, ಪರೋಪಕಾರಗಳು ಈ ಕಲಿಯುಗದಲ್ಲಿ ಮಾಯವಾಗುತ್ತಿರುವುದಿಲ್ಲವೆ ? ಕಲಿರಾಯನ ಅಧಿಕಾರದ ಠೀವಿಗೆ ಸಿಕ್ಕದೆ ನನ್ನನ್ನೇ ನಂಬಿರುವವರು ಕೆಲವರಿದ್ದಾರೆ. ಅವರನ್ನು ನಾನು ಸುಮ್ಮನೆ ಬಿಡುವುದಿಲ್ಲ ಬಹಳವಾಗಿ ಪೀಡಿಸುತ್ತೇನೆ. ಎಷ್ಟೇ ಕಷ್ಟಗಳು ಬರಲಿ, ತಮ್ಮ ಸತ್ಸಂಕಲ್ಪವನ್ನು ಬಿಡದಿರುವವರೇ ನನ್ನ ನಿಜವಾದ ಭಕ್ತರು. ಲೋಕದ ಹಿತಚಿಂತಕರೇ ನನ್ನ ಆರಾಧಕರು. ಇಂತಹವರನ್ನು ನಾನು ವೈರದಿಂದ ಪರೀಕ್ಷಿಸುವುದಿಲ್ಲ. ಶುದ್ಧ ಭಂಗಾರವು ಸಿಕ್ಕಬೇಕಾದರೆ ಎಷ್ಟು ಸಲ ಕರಗಿಸಿ ನೀರು ಮಾಡಬೇಕು ? ಕಸಗಪೆಯೇ ಬಂಗಾರವು ಶುದ್ಧವಾಗುವುದೆ ? ಹಾಗೆಯೇ ನನ್ನ ಭಕ್ತರೂ ಕಷ್ಟಗಳಿಗೆ ಸೈರಿಸಿ ಐಹಿಕ ಸುಖವು ಕ್ಷಣಿಕವೆಂದು ನಂಬಿರಬೇಕು. ಅಂತಹವರನ್ನು ಕಾಪಾಡುವ ಭಾರವು ನನ್ನದೇ ! ಅಂದರೆ ಅವರೇ ನಾನು ನಾನೇ ಅವರು. ಈ ಬಗೆಯ ಜನರಲ್ಲಿ ಪೋತನಾಮಾತ್ಯನು ನನ್ನ ಪ್ರಿಯತಮನಾದ ಭಕ್ತನು. ಐಶ್ವರ್ಯದ ಕಡೆ ಈತನ ಮನಸ್ಸೇ ಹೋಗಲೊಲ್ಲದು. ಸಂಸಾರ ಪಥದಲ್ಲಿ ಆತನಿಗೆ ತೊಂದರೆಯೇ ಅಲ್ಲವೆ ? ಲಕ್ಷ್ಮಮ್ಮಯು ಆಹಾರಕ್ಕಾಗಿ ಬಳಲೋಣ ? ಮಲ್ಲನನಿಗೆ ವ್ಯವಸಾಯ ಮಾಡಲು ಶಕ್ತಿಯಿಲ್ಲದಿರೋಣ. ಮಗಳಾದ ಕಮಲೆಯು ಎಳೆಯ ಹುಡುಗಿ. ಸೊಸೆಯು ಬೇರೆ ; ಇನ್ನೂ ಲಗ್ನವಿಲ್ಲದಿದ್ದನೂ ಶ್ರೀನಾಥನು ಅಕ್ಕನ ಬಳಿಯಲ್ಲಿಯೇ ಬಿಟ್ಟಿದ್ದಾನೆ. ಆಕೆಯು ಮಲ್ಲನನಿಗೆ ಯೋಗ್ಯ ಹೆಂಡತಿ ! ಪೋತನನಿಗೆ ಸಾರ್ಥಕ ಸೊಸೆ ! ಈಕೆಯ ಲಗ್ನವಾದರೆ ಈ ಸಂಸಾರವು ಕಲಿಯುಗ ವೈಕುಂಠವೇ ಆಗಬೇಕು. ನಾನೇ ಪೋತನ. ಜಾನಕಿಯೇ ಲಕ್ಷ್ಮಿ ! ಮಲ್ಲನನೇ ಮನ್ಮಥ ! ಶಾರದೆಯುಂಟೂ ಶಾರದೆಯೇ ! ಅಹಹಾ ! ಈ ಸಂಸಾರವನ್ನು ಕಲಿಯುಗದಲ್ಲೇ ಅಲ್ಲ; ಯುಗ ಯುಗದಲ್ಲಿಯೂ ಜನರು ಮರೆಯದಂತಿರಬೇಕು. ಇದಕ್ಕೊಂದು ಸಂವಿಧಾನವನ್ನು ಮಾಡಿ ಪೋತನನ ಮನೋಭಾವವನ್ನು ಪರೀಕ್ಷೆ ಮಾಡುವೆನು. ಎಂದು

ನಿರ್ಧರಿಸಿ ಪ್ರಿಯ ಭಕ್ತನನ್ನು ಪರೀಕ್ಷಿಸಲು ತನ್ನ ಪರಿವಾರವನ್ನೆಲ್ಲಾ ಬಿಟ್ಟು ಒಂಟಿಯಾಗಿಯೇ ಹೊರಟನು.

ವಾಮನಾವತಾರ ಘಟ್ಟವು ಪುರಾಣದ ಕಥಾಭಾಗ! ಅಲ್ಲಿ ತನ್ನ ಬರವಣಿಗೆಯ "ಇತಡೇದಾನವಚಕ್ರವರ್ತಿ" ಎಂದನು. "ಇತಡೇ ದಾ ನವಚಕ್ರವರ್ತಿ" ಎಂದೂ ಹೇಳಿದನು. "ಇತಡೇದಾನ ವಚಕ್ರವರ್ತಿ" ಎಂದನು. ಜನರಿಗೆ ಏನೇನೂ ಅರ್ಥವಾಗಲಿಲ್ಲ. ಅಕ್ಷರಗಳನ್ನು ಆ ಕಡೆ ಈ ಕಡೆ ಸೇರಿಸಿ ರಾಗವಾಗಿ ಹೇಳುವನೆಂದುಕೊಂಡರು. ವ್ಯಾಖ್ಯಾನಕ್ಕೆ ಪ್ರಾರಂಭವಾಯಿತು. ಎಲ್ಲರೂ ಬೆಚ್ಚಿಬಿದ್ದರು. ಮೊದಲನೆಯ ಸಲ ಹೇಳಿದ್ದಕ್ಕೆ ಈತನೇ ರಾಕ್ಷಸ ಚಕ್ರವರ್ತಿ ಎಂದನು. ಎರಡನೆಯ ಸಲ ಹೇಳಿದ್ದಕ್ಕೆ ಈತನೇನೋ ಏಕಚ್ಛತ್ರಾಧಿಪತ್ಯವನ್ನು ಬಯಸುತ್ತಿರುವನು ಎಂದನು. ಮೂರನೆಯಸಾರಿ ಹೇಳಿದ್ದಕ್ಕೆ ಈತನೇನೋ ದಾನವನ್ನು ವಶ ಮಾಡಿಕೊಂಡವನಂತೆ ಮೆರೆಯುವನು ಎಂದನು. ಜನರು ಇಂತಹ ಪದ ಗುಂಭನವಾದ ಗ್ರಂಥವೇ ಮತ್ತೊಂದಿಲ್ಲವೆಂದರು. ವಾಮನಮೂರ್ತಿಯು ದಾನವನ್ನು ಬೇಡಿದ ವಿಚಾರವು ಮುಗಿಯುವಾಗ್ಗೆ ಹೊತ್ತಾಗಿಹೋಯಿತು. ಮಂಗಳಾರತಿಯನ್ನು ಮುಗಿಸಿಕೊಂಡು ಮನೆಗೆ ಬರುತ್ತಿದ್ದನು. ಪೋತನನ ಆನಂದವು ಅಂದು ಮೇರೆ ಮೀರಿದ್ದಿತು. ತನ್ನಲ್ಲಿ ತಾನು "ಇದೇನು ಈ ಅಮಿತಾನಂದ! ಯಾವ ಮಹನೀಯ ಮೂರ್ತಿಯ ದರ್ಶನ ಲಾಭವು ಈ ನಾಯಿಗಿದೆಯೋ! ಇಲ್ಲವಾದರೆ ಈ ಆನಂದವೆ? ಓದಿರುವುದು ವಾಮನಾವತಾರದ ವಿಷಯ. ಬಲಿಯನ್ನು ದಾನ ಬೇಡಿದುದು. ಆ ಪರಾತ್ಪರನಿಗೆ ತ್ರಿಪಾದ ಭೂಮಿಯು ಬೇಕಾಯಿತೆ? 'ದೇಹಿ' ಎಂದು ಹೇಳುವುದೇ ಹೀನಾಯವಲ್ಲವೆ? ಇದಕ್ಕೆ ಮಹಾವಿಷ್ಣುವು ಹೇಗೆ ಸಮ್ಮತಿಸಿದನು? ಪರಮಾತ್ಮಾ! ನೀನು ಲೋಕೋದ್ಧಾರಕ್ಕಾಗಿ ಯಾವ ಕೆಲಸವನ್ನಾದರೂ ಮಾಡಿಬಿಡುವೆ. ಹೀನಮಾನಗಳು ಲೋಕಾಡಂಬರವುಳ್ಳವರಿಗಲ್ಲದೆ ನಿನಗುಂಟೆ? ಅಂದುಕೊಳ್ಳುತ್ತಾ ಮನೆಗೆ ಬಂದನು. ಬಾಗಿಲು ಹಾಕಿದ್ದಿತು. ಕೂಗಿದನು. ಲಕ್ಷ್ಮಿಯು ಬಾಗಿಲು ತೆಗೆದಳು. ಅಂದು ಮೂವರ ಆಹಾರವೂ ಮನೆಯಲ್ಲಿದೆ. ಅಡಿಗೆ ಮಾಡಲು ಪದಾರ್ಥಗಳೇ ಇಲ್ಲ; ಹೇಗಾದರೂ ಸರಿ ಮಾಡೋಣವೆಂದು ನಿರ್ಧರವಾಗಿದ್ದಿತು. ಒಳಗೆ ಬರುತ್ತಲೇ ಪೋತನನು ಕೈಕಾಲುಗಳನ್ನು ತೊಳೆದುಕೊಂಡು 'ಎಲ್ಲರದೂ ಊಟವಾಯಿತೆ?" ಎಂದನು. ಲಕ್ಷ್ಮಿಯು ತಲೆಯಲ್ಲಾಡಿಸಿದಳು. ಅವಸರವಸರವಾಗಿ ಬಾಗಲಿನ ಬಳಿಗೆ ಬಂದನು.

ಜೀರ್ಣ ವಸ್ತ್ರಗಳ ಆಲಂಕಾರ! ಕೈಲೊಂದು ಗಂಟು, ಶಲ್ಯಮಾತ್ರ ಶರೀರ! ಅದೂ ವಕ್ರ. ಪ್ರಯಾಣ ಸೌಲಭ್ಯಕ್ಕಾಗಿ ಕೈಯಲ್ಲಿ ತನ್ನುದ್ದವೂ ಇರುವ ಬಿದಿರು ಕೋಲು. ಕೂದಲಿನ ವಿಕಾರ! ಬಟ್ಟೆಗಳ ಮಾಲಿನ್ಯವನ್ನು ನೋಡಿದರೆ ಅಸಹ್ಯವಾಗುವ ಬಗೆ! ಹೀಗಿರುವ ಒಬ್ಬ ವ್ಯಕ್ತಿಯು 'ಕವಳಾ' ಎಂದು ಕೂಗುತ್ತಾ

ಬಾಗಲಿನ ಬಳಿಗೆ ಬಂದನು. ಈ ಮಾತು ಪೋತನಾಮಾತ್ಯನಿಗೆ ಹೃದಯ ಶೂಲ ವಾಯಿತು. ತಕ್ಷಣವೇ ಬಾಗಿಲು ತೆಗೆದು ಹೊರಗಿರುವ ವ್ಯಕ್ತಿಯನ್ನು ನೋಡಿದನು. ಆನಂದವ ಹೊನಲು ಹೊರಹೊಮ್ಮಿತು. ನಿರ್ವಿಣ್ಣನಾಗಿ,

"ಅಪ್ಪಾ ! ಈ ಮಧ್ಯರಾತ್ರಿಯ ಸಮಯದಲ್ಲಿ ಕವಳವೆ ?

"ಸ್ವಾಮಿ ! ತಿಂಡಿ ತಿಂದು ನಾಲ್ಕು ದಿನಗಳಾಯಿತು. ಊರೆಲ್ಲಾ ತಿರುಗಿದೆ. ಒಂದು ತುತ್ತು ಅನ್ನವಾದರೂ ಸಿಕ್ಕಲಿಲ್ಲ."

"ಅಯ್ಯೋ ! ಪಾಪ ! ದೇವರು ನಿನಗೆ ಹೀಗೆ ಮಾಡಿದನೆ ?" ಅಪ್ಪಾ ಬಾ ! 'ಅಭ್ಯಾಗತ ಸ್ವಯಂ ವಿಷ್ಣುಃ' ಎಂಬುದು ನಿಜವಾದ ಮಾತು. ನೀನು ನಾರಾಯಣ ಮೂರ್ತಿಯೇ ಅಲ್ಲದೆ ಭಿರುಕನಲ್ಲ. ನಿನ್ನ ದರ್ಶನವಾದ ದಿನವೇ ಸುದಿನ. ಭಕ್ತನಲ್ಲಿ ಅನುಗ್ರಹಿಸು. ಭಕ್ತ ಜನಾನುಗ್ರಹಾಕಾಂಕ್ಷಿಯಾದ ನಿನಗೆ ನಾಲ್ಕು ದಿನಗಳಿಂದ ತಿಂಡಿಯಿಲ್ಲವೆ ? ಯಾರ ಸೇವೆಗೆ ಹೊರಟಿದ್ದೆ. ಶಬರಿಯು ಹಣ್ಣುಗಳನ್ನು ಕೊಡಲಿಲ್ಲವೆ ? ಉಗ್ರಸೇನ ವಸುದೇವ ದೇವಕಿಯರನ್ನು ಕಂಸನು ಮತ್ತೆ ಸೆರೆ ಸೇರಿಸಿದನೆ ? ಪಾಂಚಾಲಿಯು ಸಹಾಯವನ್ನು ಅಪೇಕ್ಷಿಸಿದಳೆ ? ತಂದೇ ! ಕರುಣಾನಿಧಿಯಾದ ನಿನಗೆ ನಾಲ್ಕುದಿನಗಳ ಉಪವಾಸವೆ ? ನನ್ನ ಹೊಟ್ಟೆಯೇ ಉರಿಯುತ್ತಿರುವುದಲ್ಲಾ ! ಬಾ ! ಇನ್ನು ಆಲಸ್ಯವನ್ನು ಮಾಡಲಾರೆ.

ಅನ್ನುತ್ತಾ ಆತನ ಪಾದಗಳನ್ನು ನಿರ್ಮಲೋದಕದಿಂದ ತೊಳೆದು ತನ್ನ ಉತ್ತರೀಯದಿಂದ ಬರಸಿ ಪಾದೋದಕವನ್ನು ತೀರ್ಥವಾಗಿ ಗ್ರಹಿಸಿ, ಮನೆಯೊಳಕ್ಕೆ ಕರೆದುಕೊಂಡು ಹೋಗಿ, ಪೀಠದಮೇಲೆ ಕುಳ್ಳಿರಿಸಿ, ಪಾದಗಳನ್ನೊತ್ತುತ್ತಾ "ಲಕ್ಷ್ಮೀ ! ಕೋದಂಡರಾಮಸ್ವಾಮಿ ನಮ್ಮ ಮನೆಗೆ ಬಂದಿದ್ದಾನೆ. ಬಡಿಸು ! " ಎಂದನು. ಮೂವರ ಆಹಾರದಲ್ಲಿ ಒಬ್ಬರದುಹೋಯಿತೆಂದು ಲಕ್ಷ್ಮಿಗೆ ಅಸಮಾಧಾನವೇ ಆಯಿತು. ಆದರೇನು ? ಪತಿಯ ಆಜ್ಞೆಗೆ ವಿರೋಧವಾಗಿ ನಡೆಯುವ ಸ್ವಭಾವವೇ ಆಕೆಯದಲ್ಲ. ಎಲೆಯನ್ನು ಹಾಕಿ ಬಡಿಸುತ್ತಾ ಬಂದಳು. ಪೋತನನು ಭಿಕ್ಷುಕನಿಗೆ ಉಪಚಾರವನ್ನು ಹೇಳುತ್ತಾ ಪಕ್ಕದಲ್ಲಿಯೇ ಕುಳಿತುಕೊಂಡನು. ಒಂದು ತುತ್ತು ಅನ್ನವು ಪಾತ್ರೆಯಲ್ಲಿ ಉಳಿಯುವವರೆಗೂ ಬಡಿಸಿದ್ದಾಯಿತು. ಆಗ ಭಿಕ್ಷುಕನು, ಸಾಕು ಮಹರಾಯಾ ! ನಿನ್ನ ದಯಾಗುಣವೂ ಆದರಣೆಯೂ ಸ್ತುತ್ಯವು. ಈ ಊರಿನಲ್ಲಿಯೇ ಇಷ್ಟುಮಾತ್ರದವರಿಲ್ಲ' ಎಂದನು. ಅದನ್ನು ಕೇಳಿ ಪೋತನನು, "ಮಹಾತ್ಮಾ ! ಇಡುವವರು ಯಾರು ? ಊಟ ಮಾಡುವವರು ಯಾರು ? ಅನ್ನವು ಯಾರದು ? ಎಲ್ಲಾ ಪರಮಾತ್ಮ ಸ್ವರೂಪನಾದ ನಿನ್ನ ಲೀಲೆಯೇ ಅಲ್ಲವೆ ? ಒಂದು ರೂಪವಾಗಿ ಅನ್ನವನ್ನು ಮಾಡುವೆ. ಮತ್ತೊಂದು ರೂಪವಾಗಿ ಬಿಡಿಸುವೆ

ಇನ್ನೊಂದು ರೂಪವಾಗಿ ಊಟ ಮಾಡುವೆ. ಎಲ್ಲವೂ ನೀನೇ! ಪರಮಾತ್ಮಾ! ನೀನಿಲ್ಲದ ವಸ್ತುವೇ ಲೋಕದಲ್ಲಿಲ್ಲ, ಎಂದು ಹೇಳುತ್ತಾ ಮತ್ತೆ ಮತ್ತೆ ಆತನಿಗೆ ನಮಸ್ಕಾರ ಮಾಡುತ್ತಿದ್ದನು. ಈ ಉಪಚಾರಕ್ಕೂ ನಿಜವಾದ ಭಕ್ತಿಗೂ ಭಿಕ್ಷುಕನ ಕಣ್ಣುಗಳಲ್ಲಿ ನೀರುದುರಿತು. ಪೋತನನ ಕೈಯನ್ನು ಹಿಡಿದುಕೊಂಡು. ಮೆಲ್ಲಗೆ ಹೊರಗೆ ಬಂದು, – "ಪೋತನಾ ನಾನು ಹೊರಡುತ್ತೇನೆ. ನೀನು ಹೋಗಿ ಊಟ ಮಾಡು" ಎಂದನು. ಭಿಕ್ಷುಕನ ಕರಸ್ಪರ್ಶವಾಗುತ್ತಲೇ ಪೋತನಾಮಾತ್ಯನಿಗೆ ಆನಂದದಲ್ಲಿ ಮೈ ಮರೆಯಿತು. ಹಾಗೆಯೇ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಮೇಲಕ್ಕೆದ್ದು ನೋಡುವಲ್ಲಿ ಶ್ಯಾಮಲವರ್ಣ! ಅಂದವಾದ ಕೇಶಪಾಶ! ಪೀತಾಂಬರಾಲಂಕಾರ! ತುಲಸೀಮಣಿಗಳ ಹಾರ! ಶಂಖ ಚಕ್ರಗಳ ಶೃಂಗಾರ! ಮೃದುವಾದ ಶರೀರ! ಮಧುರವಾಣಿಯಿಂದ ಅಭಯ ಹಸ್ತವನ್ನು ಪೋತನನ ತಲೆಯ ಮೇಲಿಟ್ಟು,

"ಭಕ್ತಾಗ್ರಣೀ! ನಿನ್ನಿಂದ ಲೋಕ ಪಾವನವಾಗಬೇಕು. ಸ್ವಾರ್ಥ ತ್ಯಾಗವು ಮನುಷ್ಯ ಶರೀರಕ್ಕೆ ಅಭ್ಯಾಸವಾಗುವುದು ಬಹಳ ಕಷ್ಟ. ಅದನ್ನು ನೀನು ಕರತಲಾಮಲಕ ಮಾಡಿಕೊಂಡಿರುತ್ತೀಯೆ. ಸಂಸಾರ ಕಾನನದಲ್ಲಿರುವ ನೀನು ಕಾಮಾದಿ ಅರಿಷಡ್ವರ್ಗಗಳ ಬಾಧೆಯನ್ನು ನನಗೆ ಅರ್ಪಿಸುತ್ತಿದ್ದೀಯೆ. ಆಹಾಳು ಸರ್ಪಗಳು ನನ್ನನ್ನು ಕಚ್ಚುತ್ತಿರುವುವು. ನಾನು ನೀನು ಎಂಬ ಭೇದವೇ ನಿನ್ನಲ್ಲಲ್ಲ. ತಿಂಡಿಗಿಲ್ಲದೆ ಅಲೆಯುತ್ತಿದ್ದರೂ ಇದ್ದ ಒಪ್ಪೊತ್ತಿನ ಗ್ರಾಸವನ್ನು ಆನಂದದಿಂದ ನನಗೆ ಒಪ್ಪಿಸಿದ್ದೀಯೆ! ಇನ್ನು ನಿನಗೆ ಆಹಾರವನ್ನು ಒದಗಿಸುವ ಭಾರವು ಯಾರದು? ನಿನ್ನಂತಹವರು ಲೋಕದಲ್ಲಿಯೇ ಇಲ್ಲ. ಜನ್ಮರಾಹಿತ್ಯವೆಂದೇ ಕೆಲವರು ಸಗುಣಾರಾಧನೆಯನ್ನು ದೂರಮಾಡಿ ಸ್ವಾರ್ಥಪರರಾಗಿರುವರು. ಅವರು ಎಲ್ಲವೂ ನಾನೇ ಎಂಬ ಅಹಂಭಾವತ್ವವನ್ನು ತೋರಿಸುವರು. ಶರೀರವು ನಿಷ್ಪ್ರಯೋಜನವೆಂದು ಬಾಯಲ್ಲಿ ಹೇಳುವರು. ಅದಕ್ಕೆ ಸ್ವಲ್ಪವೂ ತೊಂದರೆಯಾಗದಂತೆ ಎಚ್ಚರವಾಗಿರುವರು. ಇಂತಹವರಿಗೆ ಜನ್ಮರಾಹಿತ್ಯವೆಂಬರೇನು? ನೀನು ಬರೆಯುತ್ತಿರುವ ಭಾಗವತವು ನನ್ನದಾಗಿರುವುದು. ಇದನ್ನು ಓದಿದವರು ಕೇಳಿದವರು ನನ್ನನ್ನು ಕಂಡಂತೆಯೇ! ಕುತರ್ಕಗಳು ನರಕಕ್ಕೆ ಹಾದಿಗಳು. ಪೋತನಾ! ನೀನೂ ಸರ್ವಾಂತರ್ಯಾಮಿಯಾಗುವೆ. ನಿನ್ನ ಭಾಗವತವು ಆಚಂದ್ರಾರ್ಕವೂ ಅಮೋಘವೂ ಆದುದು. ಇದನ್ನು ಪೂರ್ತಿ ಮಾಡು" ಎಂದು ಹೇಳಿ ಅಂತರ್ಧಾನನಾದನು. ಈ ಪ್ರಕಾಶವೂ ವಾಣಿಯೂ ಅದೃಶ್ಯವಾಗುತ್ತಲೇ ಪೋತನನಿಗೆ ನಿಧಿಯನ್ನು ಕಳೆದುಕೊಂಡವನಂತೆ ಬಹಳ ದುಃಖವಾಯಿತು. ನಿಧಾನವಾಗಿ ಹೆಜ್ಜೆಗಳನ್ನಿಡುತ್ತಾ ಮನೆಯೊಳಕ್ಕೆ ಬಂದನು. ಲಕ್ಷ್ಮಿಯು ಮಗಳನ್ನೂ ಸೊಸೆಯನ್ನೂ ನೋಡಿ, ಹೆಚ್ಚು ಮೋರೆ ಹಾಕಿದಳು. ಇಂದು ಉಪವಾಸವೇ ಎಂದು ನಿರ್ಧರಿಸಿದರು. ಮಲ್ಲನ ಎತ್ತುಗಳಿಗೆ

ಮೇವು ಹಾಕಿ ಮಲಗೋಣವೆಂದು ಕೊಟ್ಟಗೆಗೆ ಹೋದನು. ಶಾರದೆಯು ಆನಂದ ದಿಂದಿದ್ದಳು. ಪೋತನನು,

"ಲಕ್ಷ್ಮೀ! ದೇವರ ಮಂಗಳಾರತಿಗೆ ಬನ್ನಿ. ಮಲ್ಲನಾ, ನೀನೂ ಬಾ ಎಲ್ಲರೂ ಕೈಕಾಲುಗಳನ್ನು ತೊಳೆದುಕೊಂಡು ಬನ್ನಿ."

"ಏನು ಬೇಕಾದರೂ ನೀವೇ ಮಾಡಿಕೊಳ್ಳಿ. ದೇವರ ಪೂಜಾ ಫಲವು ನಿಮಗೇ ಸಾಕು."

"ಹಾಗಲ್ಲ, ನಾನು ಈ ಮನೆಯಲ್ಲಿರುವವರೆಗೂ ಫಲವು ಎಲ್ಲರಿಗೂ ಬೇಕು. ಹಾಗಲ್ಲದಿದ್ದರೆ ನಾನು ದ್ರೋಹಿಯಲ್ಲವೆ?"

"ದ್ರೋಹವೂ ಇಲ್ಲ, ಏನೂ ಇಲ್ಲ. ಇದ್ದ ತಿಂಡಿಯನ್ನು ದಾರಿಹೋಕರಿಗೆ ಹಂಚಿ, ಎಲ್ಲರನ್ನೂ ಉಪವಾಸ ಕೆಡವಿದರೆ ದ್ರೋಹವಲ್ಲವೋ?"

"ಹಾಗೆನ್ನಬೇಡ ಲಕ್ಷ್ಮೀ! ಉಪವಾಸವಿರುವವರು ಯಾರು?"

"ಯಾರೆಂದರೆ ನಾನು, ಶಾರದೆ, ಮಲ್ಲನ, ಕಮಲೂ ಇನ್ನೂ ಹೇಳಿದರೆ ನೀವು"

"ಈ ಭೇದಗಳು ಹೋಗಬೇಕು. ನೀನು ಹೇಳಿದ ಹೆಸರುಗಳಲ್ಲಿರುವ ಚೈತನ್ಯ ವೊಂದೇ ಅಲ್ಲವೆ? ಆ ಚೈತನ್ಯವೇ ಪರಮಾತ್ಮನು. ಆತನು ಮತ್ತೊಂದು ರೂಪವಾಗಿ ಬಂದು ಊಟ ಮಾಡಿದನು. ಆತನ ತೃಪ್ತಿಯು ನಮ್ಮ ತೃಪ್ತಿಯಾಗಬೇಕು"

"ಒಳ್ಳೇ ತೃಪ್ತಿ, ಒಳ್ಳೇ ತೃಪ್ತಿ, ಈ ತೃಪ್ತಿಯಿಂದ ನಮಗೆ ಹೊಟ್ಟೆ ತುಂಬಿತೆ?"

"ನಿಜವಾದ ತೃಪ್ತಿಯಿದ್ದರೆ, ಹೊಟ್ಟೆ ತುಂಬದೆ ಏನು? ದೇವಸ್ಥಾನದಲ್ಲಿ ಪನ್ಯಾರ ತಿಂದು ಬಂದಿದ್ದರೆ....?"

"ದೇವಸ್ಥಾನದಲ್ಲಿ? ಪನ್ಯಾರ? ಯಾರಿಗೆ ಬೇಕು? ನಾನಂತಹ ದೈವ ದ್ರೋಹಿಯೆ?" ಹಾಗಲ್ಲ "ಹಾಗಾದರೆ ಪನ್ಯಾರವನ್ನು ತೆಗೆದುಕೊಳ್ಳುವರೆಲ್ಲಾ ದೈವ ದ್ರೋಹಿಗಳಷ್ಟೆ?"

"ಹಾಗಲ್ಲ. ಅದು ಭಗವದರ್ಪಿತವಾಗಬೇಕಾದುದು. ಪುರಾಣವನ್ನು ಕೇಳ ತಕ್ಕವರೆಲ್ಲಾ ಭಾಗವತರು. ಪರಮಾತ್ಮನು ಭಾಗವತರ ಅಂತರ್ಗತನಾಗಿರುತ್ತಾನೆ. ಅವರಿಗೆ ಸಮರ್ಪಣೆಯಾದರೆ ಭಗವಂತನಿಗೆ ಸೇರಿದಂತೆಯೇ! ಯಾರೂ ಇಲ್ಲದ ಕಡೆ ಪುರಾಣ ಹೇಳಿದರೆ ಶೋಭಾಯಮಾನವಾಗುವುದೆ? ಆನಂದಸಾಗರವು ಅಲ್ಲಿರು ವುದೆ? ಆನಂದವು ಕೇಳುವರ ಸಮೂಹದಲ್ಲಿದೆ"

" ಏನು ಆನಂದವೋ ಏನೋ ನಿಮ್ಮ ವ್ಯಾಖ್ಯಾನವು ನಿಮಗೇ ಸರಿ ! "

" ಪ್ರಪಂಚವೇ ಹಾಗೆ, ಒಬ್ಬೊಬ್ಬರಿಗೆ ಒಂದೊಂದು ಆನಂದ. ಶರೀರ ಸುಖದಲ್ಲಿ ಕೆಲವರಿಗೆ ಆನಂದ. ಪರದ್ರವ್ಯಾಪಹರಣದಲ್ಲಿ ಕೆಲವರಿಗೆ ಆನಂದ ! ದೈವ ಭಕ್ತಿಯಲ್ಲಿ ಕೆಲವರಿಗೆ ಆನಂದ ! ಈ ಗುಂಪೆಲ್ಲಾ ಒಂದೇಕಡೆ ಸೇರಿದರೂ ತಮ್ಮ ತಮ್ಮ ಅನುಭವಕ್ಕಾಗಿ ಕಿತ್ತಾಡಿ ವ್ಯಥೆಯಿಂದ ಶರೀರವನ್ನು ಶುಷ್ಕಿಸುವರು. "

" ತಿಂಡಿಗಿಲ್ಲದಿದ್ದರೆ ಶರೀರವು ಶುಷ್ಕವಾಗಿ ಪರಲೋಕ ಯಾತ್ರೆ ಮಾಡಬೇಕಾದ್ದೇ ! "

" ಅಲ್ಲಿಗೂ ಸಂತೋಷವೇ ಆಯಿತು. ಎಷ್ಟು ಸುಖವಾಗಿಟ್ಟಿದ್ದರೂ ಶರೀರವು ಪರಲೋಕ ಯಾತ್ರೆ ಮಾಡಬೇಕಾದ್ದೇ ! "

" ನಾವೆಲ್ಲಾ ಉಪವಾಸ ಸತ್ತರೂ ನಿಮಗೆ ಸಂತೋಷವೇ ಅಲ್ಲವೆ ? ಆಗಬಹುದು. ಆಗಬಹುದು. "

" ಸಾಯುವ ವಸ್ತುವು ಶಾಶ್ವತವಾಗಿರುವುದಿಲ್ಲ. ಶಾಶ್ವತವಾದ ವಸ್ತುವು ಸಾಯುವುದಿಲ್ಲ. ಇದೀಗ ರಹಸ್ಯ. "

" ನಿಮ್ಮ ರಹಸ್ಯಗಳು ಸಾಕು. ಪಿಂಡಕ್ಕೆ ಮಾರ್ಗವಿಲ್ಲದವರಿಗೇಕೆ ರಹಸ್ಯಗಳು ? "

" ಪಿಂಡಕ್ಕೆ ಮಾರ್ಗವಿಲ್ಲದಾಗಲೇ ರಹಸ್ಯಗಳಿಗೆ ಅವಕಾಶ. ಹೊಟ್ಟೆ ತುಂಬಿದ ಮೇಲೆ ಯಾವ ಯೋಚನೆಯೂ ಬೇಕಾಗುವುದಿಲ್ಲ. ದರಿದ್ರನಿಂದಲೇ ಲೋಕ ಸೇವೆಯು ಚನ್ನಾಗಿ ನಡೆಯುತ್ತದೆ ! "

" ದಾರಿದ್ರ್ಯವನ್ನು ನಿಮ್ಮಂತೆ ಅಪೇಕ್ಷಿಸುವರು ಯಾರಿದ್ದಾರೆ ? ಅದು ನಮ್ಮ ಶತೃಗಳಿಗೂ ಬೇಡ. "

" ಶತೃಗಳು ಯಾರು ? ಮಿತ್ರರು ಯಾರು ? 'ನಾನು' ಎಂಬ ಅಹಂಕಾರಕ್ಕೊಳಗಾದವನಿಗೆ ಇವೆಲ್ಲಾ. ಅದನ್ನು ಬಿಟ್ಟರೆ ಎಲ್ಲರೂ ಮಿತ್ರರೇ ! ಈ ತತ್ವವನ್ನು ತಿಳಿದವರು ' ನಾನು ' ಎಂದು ಹೇಳುವುದೇ ಇಲ್ಲ "

" ಅದೆಲ್ಲಾ ಇರಲಿ, ಅನ್ನವಿಲ್ಲದೆ ಈ ಶರೀರವು ಇರುವುದೆ ? "

" ಆಹಾರ ನಿದ್ರೆಗಳು ಬೇಡವೆಂದರೆ ಶರೀರವು ನಿಲ್ಲುವದಿಲ್ಲ. ಶರೀರವನ್ನು ನಮ್ಮ ಇರಾದೆಯಂತೆ ಇಡದಿದ್ದರೆ ದೇವರಲ್ಲಿ ಸ್ಥಳವಿಲ್ಲ. ಶ್ರೀರಾಮನು ಅರಣ್ಯಕ್ಕೆ ಹೋಗುವಾಗ ಆಹಾರಕ್ಕಾಗಿ ಯೋಚನೆಯನ್ನು ಮಾಡಿದ್ದರೆ ಆತನ ಹೆಸರು ನಿಲ್ಲು

ತ್ತಿದ್ದಿತೆ? ಸೀತೆಯು ಪತಿಯನ್ನು ಹಿಂಬಾಲಿಸದಿದ್ದಿದ್ದರೆ ಲೋಕ ಮಾತೆಯೆಂದು ಪ್ರಸಿದ್ಧಿಗೆ ಬರುತ್ತಿದ್ದಳೆ? ರಾಜೋಪಚಾರಗಳನ್ನು ಪಡೆಯುತ್ತಿದ್ದ ಈ ಬಾಲ ದಂಪತಿಗಳಿಗೆ ಕಂದ ಮೂಲಗಳ ಆಹಾರ? ದರ್ಭ ಶಯನ? ಶರೀರ ತಾಪತ್ರಯವು ಅವರಿಗಿರಲಿಲ್ಲವೆ? ಇದ್ದರೂ ಅದನ್ನು ದೂರ ಮಾಡಿ ಧರ್ಮದಂತೆ ನಡೆದು ಲೋಕ ಪ್ರಸಿದ್ಧರಾದರು. ನಾವೂ ಹಾಗೆ ಮಾಡಿದರಲ್ಲವೆ ದೇವರಲ್ಲಿ ಮೆಚ್ಚುಗೆಯನ್ನು ಪಡೆಯುವುದು?"

"ದೇವರು ಮೆಚ್ಚುವುದರಿಂದ ಲಾಭವೇನು? ಮೆಚ್ಚದಿದ್ದರೆ ಆಗುವ ತೊಂದರೆ ಯೇನು?"

"ಈ ಶರೀರವು ಭೂಮಿಗೆ ಬಂದಿರುವುದೇ ಭಗವದಿಚ್ಛೆಯಂತೆ. ಆತನ ಇಷ್ಟಕ್ಕೆ ವಿರೋಧವಾಗಿ ನಡೆಯುವುದೇ ಅಧರ್ಮ! ಕ್ಷಣಿಕವಾದ ಐಹಿಕ ಸುಖಗಳಿ ಗಾಗಿ ಕಿತ್ತಾಡುವನು ಶಾಶ್ವತವಾದ ಪರಲೋಕ ಸುಖವನ್ನು ಗಳಿಸುವುದೆಲ್ಲಿಯಾದರೂ ಉಂಟೆ? ಹೀಗಾಗಿ ಶರೀರಾಭಿಮಾನಿಯಾದ ಜೀವಾತ್ಮನು ಅಭಿಮಾನ ವಿಶೇಷದಿಂದ ಜನ್ಮಗಳನ್ನು ಎತ್ತುತ್ತಲೇ ಇರುತ್ತಾನೆ. ಜನ್ಮಗಳನ್ನು ಎತ್ತದಿರಬೇಕೆಂದೇ ಜೀವ ನ್ಮುಕ್ತರ ಇಷ್ಟ. ಎಲ್ಲಿಯುವರೆಗೆ ಮನುಷ್ಯನ ಹೆಸರು ಭೂಮಿಯ ಮೇಲಿರುವುದೋ ಅಲ್ಲಿಯವರೆಗೆ ಆ ಜೀವಾತ್ಮನಿಗೆ ಜನನ ಮರಣಗಳ ತಾಪತ್ರಯವಿಲ್ಲ. ಆನಂದದಲ್ಲಿ ಲೀನನಾಗಿರುತ್ತಾನೆ. ಇದಕ್ಕಾಗಿ ಕೆಲಸ ಮಾಡಬೇಕಾದುದು ಮನುಷ್ಯ ಶರೀರ ಧಾರಿಯ ಮುಖ್ಯ ಕರ್ತವ್ಯ."

"ಈ ಪುರಾಣಗಳನ್ನೆಲ್ಲಾ ಕಲಿಯದಿದ್ದರೆ ಮನೆಯಲ್ಲಿರುವ ಪದಾರ್ಥಗಳು ಸುಲಭವಾಗಿ ಇತರರಿಗೆ ಸಿಕ್ಕುತ್ತಿದ್ದುವೆ?"

"ಇತರರು ಯಾರು? ನಮ್ಮವರು ಯಾರು? 'ಬಾಂಧವಾ ವಿಷ್ಣು ಭಕ್ತಾಶ್ಚ' ದೈವ ಭಕ್ತರೆಲ್ಲಾ ತಮ್ಮವರೇ! ಇರಲಿ ಹೊತ್ತಾಯಿತು. ಸ್ವಲ್ಪ ನೀರನ್ನು ತೆಗೆದು ಕೊಂಡು ಬಾ, ದೇವರ ಮಂಗಳಾರತಿಯನ್ನು ಮಾಡೋಣ."

ಇಷ್ಟಾಗುವ ವೇಳೆಗೆ ಕಮಲೆಯು ಕುಣಿಯುತ್ತಾ ಬಂದು, ಏನೂ ಹೇಳಲಾರದೆ ಅಮ್ಮಾ! ಬಾ ಬಾ! ಎಂದು ಲಕ್ಷ್ಮಿಯನ್ನು ಕೈ ಹಿಡಿದು ಮನೆಯೊಳಕ್ಕೆ ಎಳೆದು ಕೊಂಡು ಹೋದಳು. ಶಾರದೆಯೂ ಬಂದಳು. ಪಾತ್ರೆಗಳಲ್ಲೆಲ್ಲಾ ಹಾಲು ತುಂಬಿ ದ್ದಿತು. ಹಣ್ಣು ಹಂಪಲುಗಳ ರಾಶಿ! ಅಲ್ಲೊಂದು ಕಡೆ ಚಿತ್ರಾನ್ನದ ರಾಶಿ! ಪಕ್ಕದಲ್ಲಿಯೇ ಹಾಲು ಕೀರಿನ ದೊಡ್ಡ ಪಾತ್ರೆ. ಬಗೆ ಬಗೆಯಾದ ಭಕ್ಷ್ಯಗಳು! ಮಲ್ಲನನೂ ಬಂದು ನೋಡಿದನು. ಆನಂದಭರಿತರಾದರು. ಈ ವಿಚಾರವನ್ನು ಮನೆಯ ಯಜಮಾನರಿಗೆ ತಿಳಿಸಬೇಕೆಂಬ ಆಶೆ. ಅಲ್ಲಿರುವ ಅನೇಕ ಪದಾರ್ಥಗಳ

ಹೆಸರೇ ಯಾರಿಗೂ ತಿಳಿಯದು. ಇನ್ನು ಹೇಳುವುದು ಹೇಗೆ? ಮತ್ತೆ 'ಲಕ್ಷ್ಮೀ!' ಎಂಬ ಕರೆಯು ಬಂದಿತು. ಎಲ್ಲರೂ ದೇವರ ಮನೆಗೆ ಹೋದರು. ಮಂಗಳಾರತಿಯೂ ಮುಗಿಯಿತು. ಆ ದಿನ ಮಂಗಳಾರತಿಯು ನಡೆದುದೇ ಒಂದು ವಿಧವಾಗಿದ್ದಿತು. ನಿಜವಾದ ಭಕ್ತಿಯು ಎಲ್ಲರಲ್ಲಿಯೂ ಬೇರೂರಿದ್ದಿತು. ಪೋತನಾಮಾತ್ಯನಿಂದಲ್ಲದೆ ತಮಗೆ ಮೋಕ್ಷವಿಲ್ಲವೆಂದು ದೃಢ ಮಾಡಿದರು. ಇದೇ ನಿಜವಾದ ಆನಂದ!

## ಶ್ರೀನಾಥ ಕವಿಯ ಆಗಮನ

ಸರ್ವಜ್ಞ ಸಿಂಗನ ಭೂಪಾಲನಿಗೆ ಹಗಲಿರುಳೂ ಭಾಗವತದ ಹಂಬಲವೇ! ತಾನೆಷ್ಟು ಪ್ರಯತ್ನ ಮಾಡಿದರೂ ದ್ರವ್ಯಾಪೇಕ್ಷೆಯನ್ನು ಹುಟ್ಟಿಸಿದರೂ ಪೋತನನು ಭಾಗವತವನ್ನು ತನ್ನ ಹೆಸರಿಗೆ ಅಂಕಿತ ಮಾಡಲೊಪ್ಪಲಿಲ್ಲ. ಕಾವ್ಯದ ಪ್ರತಿಯೊಂದು ಪದ್ಯವೂ ನನ್ನ ಶರೀರವನ್ನೇ ಮರೆಯಿಸುವುದು. ನಾನು ಚಿನ್ನನ್ನ, ತಿಮ್ಮನ, ಮೊದಲಾದವರ ಕವಿತಾಪಾಕದಿಂದ ಆನಂದಿಸಿದ್ದೇನೆ. ಶ್ರೀನಾಥ ಕವಿಯಂತೂ ಹಗಲಿರುಳೂ ಕವಿತಾ ಸಾಗರದಲ್ಲಿ ಮುಳುಗಿಸುತ್ತಲೇ ಇದ್ದಾನೆ. ಯಾರೆಷ್ಟು ಹೇಳಿದರೂ ಆತನದು ದ್ರಾಕ್ಷಾಪಾಕ! ಏನು! ಏನು! 'ಕೊಂದರಿಕಿ ತಿನುಗು ಗುಣಮುಗು' ಈ ಪದ್ಯವೊಂದೇ ಸಾಲದೆ ಆತನ ಪ್ರೌಢಿಮೆಗೆ ನನ್ನ ಪ್ರಭುತ್ವದಲ್ಲಿಯೇ ಇದ್ದು ಇಷ್ಟು ಹಟಮಾರಿತನವೆ? ರಾಜಭೀತಿಯಿಲ್ಲವೆ? ಒಂದು ಕಾವ್ಯವನ್ನು ನನ್ನ ಹೆಸರಿಗೆ ಅಂಕಿತ ಮಾಡುವುದರಿಂದ ನಷ್ಟವೇನು? ಆದಾಯವೇ ಅಲ್ಲವೆ? ಲಾಭದಾಶೆಯು ಆತನಿಗಿಲ್ಲವೆ? ಇದ್ದರೂ ತಿರಸ್ಕಾರವೆ? ಹೋದವರು ನನ್ನ ಮನೋಗತವನ್ನು ಆತನಿಗೆ ಸರಿಯಾಗಿ ತಿಳಿಸಿದರೋ ಇಲ್ಲವೊ! ಆತನೇನೂ ಐಶ್ವರ್ಯವಂತನಲ್ಲ ದ್ರವ್ಯಾಪೇಕ್ಷೆ ದರಿದ್ರನಿಗಿಲ್ಲವೆ?" ಎಂದು ಯೋಚಿಸುತ್ತಿರುವಷ್ಟರಲ್ಲಿಯೇ ಶ್ರೀನಾಥನೂ ಬಂದನು. ರಾಜನ ಆಲೋಚನಾಮಂದಿರದಲ್ಲಿ ಮತ್ತೆ ಯಾರೂ ಇರಲಿಲ್ಲ. ದೊರೆಯು ಈತನನ್ನು ನೋಡುತ್ತಲೇ ಆನಂದಪರವಶನಾಗಿ ತನ್ನ ಉದ್ದಿಶ್ಯವು ನೆರವೇರುವುದೆಂದು ಕವಿಗೆ ಮನ್ನಣೆಯನ್ನು ಮಾಡಿ ಉಚಿತಾಸನದಲ್ಲಿ ಕುಳ್ಳಿರಿಸಿ,—

"ಪೋತನ ಭಾಗವತವು ಶ್ರೇಷ್ಠವಾದುದೆಂದೂ ಐಹಿಕಾಮುಷ್ಮಿಕ ಫಲ ಮಾರ್ಗದರ್ಶಿಯೆಂದೂ ಕೇಳಿದೆ."

"ಕೇಳಲಾರೆ, ಇದು ಎರಡನೆಯ ಸಾರಿ. ದನ ಕಾಯುವ ಪೋತನ ಧರ್ಮಗ್ರಂಥವನ್ನು ಬರೆಯುತ್ತಾನಂತೆ! ತಿಂಡಿಗಿಲ್ಲದ ತಾಪತ್ರಯವೊಂದೇ ಸಾಲದೆ? ಭೂಪಾಲಾ! ಕವಿತ್ವವು ಸುಮ್ಮನೆ ಬರುವುದೆಂದು ತಿಳಿಯಬೇಡ. ಇದಕ್ಕೆ ಪೂರ್ವಜನ್ಮದ ಸುಕೃತವಿರಬೇಕು. ಅಂತಹವನು ಈ ಜನ್ಮದಲ್ಲಿ ತಾಪತ್ರಯರಹಿತನಾಗಿರು

ತ್ತಾನೆ. ಪೋತನನಿಗೆ ಆಶ್ರಯದಾತರು ಯಾರಿದ್ದಾರೆ? ಆರ್ಯರು 'ನಿರಾಶ್ರಯಾನ ಶೋಭಂತೇ ಪಂಡಿತಾ ವನಿತಾ ಲತಾ' ಎಂದು ಹೇಳಿರಲಿಲ್ಲವೆ ?"

"ಕವಿಯು ಕವಿಗೆ ಹೊಟ್ಟೆಕಿಚ್ಚುಪಡುವುದೇ ಸ್ವಭಾವ. ರಸಜ್ಞನಿಗೆ ಗುಣ ಗ್ರಾಹ್ಯವಲ್ಲದೆ ದೋಷವು ಗ್ರಾಹ್ಯವಲ್ಲ."

"ಹೊಟ್ಟೆಕಿಚ್ಚುಪಡಲು ಪೋತನ ದೂರದವನಲ್ಲ. ನನ್ನ ಭಾವಮೈದ. ಆತನ ಹೆಂಡತಿಯೇ ನನ್ನ ಅಕ್ಕ. ನನ್ನ ಮಗಳಾದ ಶಾರದೆಯನ್ನೂ ಆತನ ಮಗನಿಗೆ ಕೊಡಬೇಕೆಂದು ಅಕ್ಕನ ಒತ್ತಾಯ. ಒಪ್ಪೊತ್ತಿನ ಕೂಳಿಗಾದರೂ ಇಲ್ಲದವನಿಗೆ ಮಗಳನ್ನು ಹೇಗೆ ಕೊಡಬೇಕೆಂಬುದೇ ನನ್ನ ಪರ್ಯಾಯ! ಈ ತಾಪತ್ರಯದ ಯೋಚನೆಯೇ ಇದುವರೆಗೂ ಆಯಿತು"

"ಈ ತಾಪತ್ರಯಗಳೊಂದೂ ಇರಲಾರದು. ಭಾಗವತವನ್ನು ನನ್ನ ಹೆಸರಿಗೆ ಅಂಕಿತ ಮಾಡಿಸಿಬಿಡು. ಹದಿನಾರು ಗ್ರಾಮಗಳ ಜಹಗೀರನ್ನು ಕೊಡುತ್ತೇನೆ. ಇನ್ನೂ ಏನು ಕೇಳಿದರೆ, ಅದನ್ನು ಕೊಡುತ್ತೇನೆ. ಆ ಗ್ರಂಥವು ಹೇಗೇ ಇರಲಿ. ಅದಕ್ಕೆ ನಾನು ಪ್ರತಿ ಹೇಳುವವನಲ್ಲ"

"ಇದಕ್ಕಿಂತಲೂ ಕಾರ್ಯವೆ? ಈಗಲೇ ಹೊರಡುತ್ತೇನೆ. ಹಳ್ಳಿಗಾಡಿನಲ್ಲಿರುವ ಅವನಿಗೆ ಐಶ್ವರ್ಯದ ಠೀವಿ ಏನು ಗೊತ್ತು ?"

ಹೀಗೆ ಮಾತನಾಡಿ ಆನಂದವನ್ನು ಸೂಚಿಸುವ ಮುಖಭಾವದಿಂದ ಹೊರಟನು. ಪೋತನಾಮಾತ್ಯನ ಅದೃಷ್ಟವು ಅವನ ಕಣ್ಣು ಮುಂದೆ ಕುಣಿದಾಡುವಂತೆ ಭಾಸವಾಯಿತು. ಹದಿನಾರು ಗ್ರಾಮಗಳ ಜಹಗೀರಿ! ಭಾಗವತದ ಅಂಕಿತ! ಇದೇ ಮಾತು. ಅದೆಂತಹ ಭಾಗವತ! ರಾಜನಿಗೆ ಹಿಡಿದಿರುವ ಈ ಹುಚ್ಚು. ನಮಗೆ ಲಾಭವೇ ಆಯಿತು. ಅಂದುಕೊಳ್ಳುತ್ತಾ ಮನೆಗೆ ಬಂದು ನಾಲ್ಕೈದು ಮಂದಿ ಕವಿಗಳನ್ನು ಜತೆಗೆ ಕರೆದುಕೊಂಡು ಮರುದಿನವೇ ಏಕಶಿಲಾನಗರಕ್ಕೆ ಪ್ರಯಾಣ ಮಾಡಿದನು. ಎರಡು ದಿನಗಳೊಳಗಾಗಿ ಏಕಶಿಲಾನಗರವನ್ನು ಸೇರಿದನು. ಪಲ್ಲಕ್ಕಿಯನ್ನು ನೋಡುತ್ತಲೇ ಲಕ್ಷ್ಮಿಗೆ ಸಂತೋಷ! ಮನೆಯಲ್ಲಿ ಏನೂ ಇಲ್ಲದ ತಾಪತ್ರಯ! ತಮ್ಮನಿಗೆ ರಾಜೋಪಚಾರಗಳು ನಡೆಯಬೇಕು. ಪತಿಯು ರಾಮ ಪೂಜಾ ಧುರಂಧರ! ಆತನಿಗೆ ಏನೂ ಬೇಕಾಗಿಲ್ಲ. ಹೇಗೋ ಮಾಡಿ ಆ ಹೊತ್ತಿನ ಗ್ರಾಸವನ್ನು ಅಣಿಮಾಡಿ ತಮ್ಮನೊಡನೆ ಸುಕ್ಷೇಮ ವಾರ್ತೆಗಳನ್ನು ಕೇಳುತ್ತಾ ಅಡಿಗೆಯನ್ನು ಮಾಡಿದಳು. ಎಲ್ಲರಿಗೂ ಊಟಗಳಾದಮೇಲೆ ತಾಂಬೂಲವನ್ನು ಅಗಿಯುತ್ತಾ ಪೋತನ ಶ್ರೀನಾಥರ ಸಂಭಾಷಣೆಗೆ ಪ್ರಾರಂಭವಾಯಿತು,

"ಭಾವಾ! ಈಗ ನೀನು ಯಾವ ಗ್ರಂಥವನ್ನು ಬರೆಯುತ್ತಿರುವೆ ?"

"ಈ ಮಾತನ್ನು ನಿನಗೆ ಯಾತು ಹೇಳಿದರು ? ಅಷ್ಟು ಸಾಮರ್ಥ್ಯವು ನನಗಿದೆಯೆ ?"

"ಕರ್ಣಾಕರ್ಣಿಯಾಗಿ ನೀನು ಆಂಧ್ರ ಭಾಗವತವನ್ನು ಬರೆಯುತ್ತಿರುವಂತೆ ಕೇಳಿದೆ."

"ಅದು ನನ್ನ ಕಾರ್ಯವಲ್ಲ. ಶ್ರೀರಾಮಚಂದ್ರಮೂರ್ತಿಯದು."

"ಚನ್ನಾಗಿದೆ. ಶ್ರೀರಾಮನು ನಿನ್ನ ಮುಂದೆ ಕುಳಿತು ಗ್ರಂಥವನ್ನು ಹೇಳುತ್ತಿರುದನೊ ?"

"ಹಾಗೆಯೇ ಸರಿ ! ಕರ್ತನೂ ಭೋಕ್ತನೂ ಎಲ್ಲವೂ ಶ್ರೀರಾಮನೇ."

"ಯಾವ ಉದ್ದಿಶ್ಯದಿಂದ ಅದನ್ನು ಬರೆಯುತ್ತಿರುವೆ ? ಏನು ಮಾಡಬೇಕೆಂದಿರುವೆ ?"

"ರಾಮಚಂದ್ರಮೂರ್ತಿಯ ಪ್ರೇರಣೆಯಂತೆ ಕೈವಲ್ಯ ಪದಕ್ಕಾಗಿ ಬರೆಯುತ್ತಿದ್ದೇನೆ."

"ಈ ವೇದಾಂತವನ್ನೆಲ್ಲ ಯಾರು ಕೇಳಿದರು ? ಭಾಗವತದ ವಿಚಾರವನ್ನು ಮಾತ್ರ ಹೇಳು."

"ಆ ವಿಚಾರವಾಗಿ ಬಂದ ಮಾತುಗಳೇ ಇವು. ಶ್ರೀರಾಮ ಪ್ರೇರಣೆಯಿಂದಲೇ ಬರೆಯುವುದು."

"ಮಧ್ಯಾಹ್ನಕ್ಕೆ ಪ್ರಸಾದವಿಲ್ಲದಿದ್ದರೆ ಆ ರಾಮನೇ ಕೊಡುವನೊ ?"

"ಹೌದು ! ಆತನೇ ಎಲ್ಲವನ್ನೂ ಕೊಡುವನು. ಈ ರಹಸ್ಯವು ಅಗೋಚರವಾಗಿರುವುದೇ ಮಾಯೆ. ಎಲ್ಲವನ್ನೂ ನಾನೇ ಮಾಡುತ್ತೇನೆಂದು ಪ್ರತಿಯೊಬ್ಬನೂ ನಂಬಿರುವನು. ಎಲ್ಲಾ ಶರೀರಗಳಲ್ಲಿಯೂ ಒಂದು ವಿಧವಾದ ಶಕ್ತಿಯಿರುವುದು. ಅದಿರುವವರೆಗೇ ಎಲ್ಲವೆ ಕಾರ್ಯಗಳು ನಡೆಯುವುದು ? ಅದು ಹೋದ ಮರು ಕ್ಷಣದಲ್ಲಿಯೇ ಈ ಶರೀರವನ್ನು 'ಹೆಣ'ವೆಂದು ಹೇಳುವುದಿಲ್ಲವೆ ? ಅದರಿಂದೇನಾಗುವುದು ?"

"ಹೇಗಾದರೂ ಆಗಲಿ, ಭಾಗವತದ ಅಂಕಿತವನ್ನು ಯಾರಿಗೆ ಹಾಕಬೇಕೆಂದಿರುವೆ ?"

"ಅದು ಶ್ರೀರಾಮಚಂದ್ರಮೂರ್ತಿಗೇ ಅಂಕಿತ. ಕೃತಿ ಕರ್ತನೇ ಆತನು."

"ಅದರಿಂದ ಬರುವ ಲಾಭವೇನು ?"

"ಲಾಭದಾಶೆಯು ಹುಟ್ಟಿದರೆ ನಷ್ಟವು ಹಿಂದೆಯೇ ಇರುವುದು. ಆ ಬಯಕೆಯೇ ನನಗಿಲ್ಲ."

"ಹೀಗಿರುವುದರಿಂದಲೇ ಸಂಸಾರದಲ್ಲಿ ಈ ತೊಂದರೆ. ಅಯ್ಯಾ ಭಾವಾ! ನನ್ನ ಮಾತನ್ನು ಕೇಳು; ನಿನ್ನ ಗ್ರಂಥವೇನೂ ಅಂತಹ ಅಮೋಘವಾದುದಲ್ಲ. ಅದನ್ನು ದೊರೆಗೆ ಅಂಕಿತ ಹಾಕಿಬಿಡು. ನಿನಗೆ ಬೇಕಾದಷ್ಟು ಸಂಭಾವನೆ ಸಿಕ್ಕುವುದು. ಇದು ಯಾವುದೋ ಒಂದು ಸುಯೋಗ! ತಿಕ್ಕನ ಸೋಮಯಾಜಿಗಿಲ್ಲ. ನನ್ನಯ್ಯ ಭಟ್ಟನಿಗಿಲ್ಲ. ಚಿನ್ನನ್ನನ ಕವಿತ್ವಕ್ಕಿಲ್ಲ. ನಿನ್ನ ಭಾಗವತಕ್ಕೆ ಬಂದಿದೆಯಪ್ಪಾ! ಗಾಳಿ ಬಂದಾಗ ತೂರಿಕೊ."

"ಭಾವಾ! ಇದೇನು ಹಾಸ್ಯವೆ? ನಿಜವೇ ಆದರೆ ಯಾರದೋ ಕೃತಿಯನ್ನು ಯಾರೋ ಅಂಕಿತ ಕೊಡುವುದೆ? ಈ ಕಳ್ಳತನವು ಕಾವ್ಯಗಳಲ್ಲಿಯೂ ನಡೆಯಬೇಕೇ? ಈ ಶರೀರ ಪೋಷಣೆಗಾಗಿ ಮಾಡಬಾರದ ಕೆಲಸಗಳನ್ನೆಲ್ಲಾ ಮಾಡಲು ನಾವು ಸಿದ್ಧರಾಗುವುದೆ? ಈ ಶರೀರವು ಶಾಶ್ವತವೆ? ಕವಿತಾ ಕನ್ಯೆಯನ್ನು ಇತರರಿಗೆ ಮಾರುವುದೆಂದರೆ, ಹೀನಾಯದಲ್ಲಿ ಹೀನಾಯವಲ್ಲವೆ? ಈ ವಿಚಾರಗಳನ್ನೆಲ್ಲಾ ನೀನು ಕೇಳಿರಲಿಲ್ಲವೆ? ಐಶ್ವರ್ಯವು ಶಾಶ್ವತವೆ? ಎಷ್ಟೇ ಐಶ್ವರ್ಯವನ್ನು ಗಳಿಸಲಿ ಅದು ನಮ್ಮ ಹಿಂದೆ ಬರುವುದೆ? ಅದಕ್ಕಾಗಿ ಕಿತ್ತಾಡುವುದಕ್ಕಿಂತಲೂ ಮೌಢ್ಯವೆ? ಕ್ಷಮಿಸಿ. ಈ ಕಾರ್ಯವನ್ನು ನಾನು ಮಾಡಲಾರೆ. ಆ ಐಶ್ವರ್ಯವೂ ಸುಖವೂ ನನಗೆ ಬೇಡ."

"ಹುಚ್ಚು ಪುಣ್ಯಾತ್ಮಾ! ತಾನಾಗಿ ಬಂದ ಐಶ್ವರ್ಯವನ್ನು ಕಾಲಿನಿಂದ ಒದೆಯಬಾರದು. ನನ್ನ ಮಾತನ್ನು ಕೇಳು; ಐಶ್ವರ್ಯವೊಂದಿದ್ದರೆ ಎಲ್ಲವೂ ಸಿದ್ಧವಾಗುವುದು. ಲೋಕವೆಲ್ಲಾ ಕಿತ್ತಾಡುವುದು ಹಣಕ್ಕಾಗಿ. ಬಂಧುಗಳೂ ಹಿತರೂ ಹಣದಿಂದಲೇ! ಕುಂಟನಾಗಲಿ ಕುರುಡನಾಗಲಿ ಲೋಕಪೂಜ್ಯನಾಗುವುದು ಹಣದಿಂದ! ಗೌರವವು ಯಾವುದರಿಂದ? 'ಹಣವಿಲ್ಲದವನು ಹೆಣ.' ಇಂತಹ ಐಶ್ವರ್ಯವು ನಿರಾಯಾಸವಾಗಿ ಬರಲಿರುವಾಗ ಬೇಡವೆಂದು ಹೇಳುವುದೆ?"

"ಅದು ನಿರಾಯಾಸವಾಗಿ ಬರುವುದು ಲೋಕದಲ್ಲಿಯೇ ಇಲ್ಲ. ಹಣದಾಸೆಯು ಅವಾಚ್ಯವಾದ ಕಾರ್ಯಗಳನ್ನೂ ಮಾಡಿಸುವುದು. ನೆಂಟರಿಷ್ಟರನ್ನೂ ದೂರ ಮಾಡುವುದು. ಗುರು ದ್ರೋಹ ಮಾಡುವಂತೆ ಪ್ರೇರಿಸುವುದು. ದೇವರಲ್ಲಿ ಭಕ್ತಿ ದಾನ ಧರ್ಮ ಪರೋಪಕಾರಗಳನ್ನು ವೈರಿಗಳನ್ನಾಗಿ ಮಾಡುವುದು. ಐಶ್ವರ್ಯವಂತನಿಗೆ ಕಣ್ಣಿದ್ದರೂ ಕಾಣಿಸುವುದಿಲ್ಲ. ಕಿವಿಯಿದ್ದರೂ ಕೇಳಿಸುವುದಿಲ್ಲ. ಕಾಲುಗಳಿದ್ದರೂ ನಡೆಯುವುದಿಲ್ಲ. ಹೆಣಕ್ಕೆ ಸಮಾನನಾಗಿರುತ್ತಾನೆ. ಪ್ರತಿ ನಿಮಿಷದಲ್ಲಿಯೂ ಇವ

ನಿಂದ ಇತರರಿಗೆ ತೊಂದರೆಯೋ! ಇದು ಅನುಭವಕ್ಕೂ ಬಾರದೆ ಇರುವುದಿಲ್ಲ. ತಾವೇನು ಹೇಳಿದರೂ ಇತರರನ್ನು ಹಿಂಸಿಸುವ ಈ ಐಶ್ವರ್ಯವು ನನಗೆ ಬೇಡ."

"ಈ ಶ್ರೀರಂಗ ನೀತಿಗಳಂತಿರಲಿ! ಮನೆಯವರು ಉಪವಾಸ ಸಾಯುತ್ತಿದ್ದರೆ ಅದು ತೃಪ್ತಿಯೆ? ತಿನ್ನುವುದಕ್ಕೆ ತಿಂಡಿ ಹೊದೆಯುವುದಕ್ಕೆ ಬಟ್ಟೆ ಇಷ್ಟಾದರೂ ಬೇಕೋ ಇಲ್ಲವೋ?"

"ತಿಂಡಿಗೆ ಮಿತಿಯೆಲ್ಲಿ? ಸ್ವಲ್ಪ ಅನುಕೂಲವನ್ನು ನಾಲಿಗೆಗೆ ಮಾಡಿಕೊಟ್ಟರೆ ಬಗೆಬಗೆಯಾದ ರುಚಿಗಳನ್ನು ಕೋರುತ್ತಲೇ ಇರುವುದು. ಹೊಟ್ಟೆಗಿಲ್ಲದವನಿಗೆ ಗಂಜಿಯನ್ನು ಕೊಟ್ಟರೂ ಮೃಷ್ಟಾನ್ನದಂತೆ ಭಾವಿಸುವನು. ಉಂಡವನಿಗೆ ಉಪಚಾರ ಮಾಡಿದರೂ ಅರ್ಧ ಹೊಟ್ಟೆಯ ಊಟವನ್ನು ಮಾಡದೆ ಎಲ್ಲಾ ಒಕ್ಕಣೆಗಳನ್ನೂ ಹೇಳುವನು. ಹಸಿವಾಗ ಸಿಕ್ಕುವ ಗೆಡ್ಡೆ ಗೆಣಸುಗಳೇ ಪಂಚ ಭಕ್ಷ್ಯಗಳಲ್ಲವೆ? ಅವು ದೈವೇಚ್ಛೆಯಂತೆ ನಮಗೆ ದೊರೆಯುವುದಿಲ್ಲವೆ? ಹೆಚ್ಚಾಗಿ ಗಳಿಸಿದುದು ಪರರ ಪಾಲೇ ಅಲ್ಲವೆ? ಅದಕ್ಕಾಗಿ ನಮಗೆ ಶ್ರಮವೇಕೆ? ನಮಗೆ ಬೇಕಾದಷ್ಟನ್ನು ಗ್ರಹಿಸೋಣ; ಉಳಿದುದು ಈಶ್ವರ ಪ್ರೀತಿಯಾಗಲಿ."

"ನಿನಗೆ ಬೇಕಾದಷ್ಟೂ ಇಲ್ಲವೆ? ಈ ವೇದಾಂತದಿಂದ ಎಲ್ಲಾ ಹಾಳಾಗಿ ಹೋಗುತ್ತಿದೆಯಲ್ಲಾ."

"ನಿಜ! ಹಿಂದೆ ಮಾಡಿದ ಕರ್ಮದಿಂದ ನನಗೆ ಎಲ್ಲಾ ಹಾಳಾಗುವುದೇ ಗಂಟು ಬಿದ್ದಿದೆ. ಇದಕ್ಕೆ ನಾನೇ ಹೊಣೆ? ಅದಕ್ಕಾಗಿ ಈಗ ಶಿಕ್ಷೆಯನ್ನು ಅನುಭವಿಸುತ್ತಿರುವುದು ಸಾಲದೆ ಮತ್ತೆ ಹಾಳಾಗುವುದಕ್ಕೇ ಪ್ರಯತ್ನಪಡುವುದು ಅವಿವೇಕದಲ್ಲಿ ಅವಿವೇಕವಲ್ಲವೆ? ಹಾಳಾಗದಿರುವುದನ್ನು ತಿಳಿದು ಅದನ್ನು ಸಾಧಿಸಲು ಪ್ರಯತ್ನಿಸುತ್ತಿದ್ದೇನೆ. ಹಿಂದಿರುಗಲು ನನಗೆ ಇಷ್ಟವಿಲ್ಲ."

"ಏನು ವೇದಾಂತವಯ್ಯಾ ಇದು? 'ಎಟುಕದ ದ್ರಾಕ್ಷೆಯ ಹಣ್ಣು ಹುಳಿ' ಅನ್ನುವಂತೆ ಮಾತನಾಡುತ್ತಿದ್ದೀಯಲ್ಲಾ."

"ದ್ರಾಕ್ಷೆಯ ಹಣ್ಣು ಎಟುಕುವುದಿಲ್ಲವೆಂದು ನಿರ್ಧರವಾದಮೇಲೆ ಅದಕ್ಕಾಗಿ ನೆಗೆದಾಡುವುದು ಮೌಢ್ಯವಲ್ಲವೆ?"

"ಇದೆಲ್ಲಾ ಕೆಲಸ ಮಾಡಲು ಕೈಲಾಗದ ಸೋಮಾರಿಗಳ ಮಾತು. ಶರೀರವನ್ನು ಸೋಮಾರಿತನದಿಂದ ಬೆಳಸಿ ಅಭಾವದಲ್ಲಿ ವಿರಕ್ತಿಯನ್ನು ತೋರಿಸುತ್ತಾ ವೇದಾಂತದ ಹರಟೆಗಳನ್ನು ಹೊಡೆಯುವುದು ಕೆಲವರ ಕೆಲಸ. ಇರುವದರಲ್ಲಿಯೇ ಸುಖವನ್ನು ಕಾಣದವನು ಪರ ಸೌಖ್ಯವನ್ನು ನೋಡುವನಂತೆ! ಅಟ್ಟಕ್ಕೇ ಹತ್ತದ

ಬಡ್ತಿ ಬೆಟ್ಟಕ್ಕೇರುವಳೆ? ನನ್ನ ಮಗಳ ಹಿತಕ್ಕಾಗಿ ಇಷ್ಟು ಹೇಳುತ್ತೇನೆ. ಸೋಮಾರಿ ತನವನ್ನು ದೂರಮಾಡು. ಭಾಗವತವನ್ನು ಸಿಂಗನ ಭೂಪಾಲನಿಗೆ ಅಂಕಿತಮಾಡು. ಮತ್ತೊಂದು ಭಾರತವನ್ನು ಬರೆದು ನಿಮ್ಮ ರಾಮನಿಗೆ ಬೇಕಾದರೆ ಅಂಕಿತ ಮಾಡು. ಈ ವ್ಯಾಪಾರದಿಂದ ನಿನಗೇನೂ ನಷ್ಟವಿಲ್ಲ; ಬರವಣಿಗೆ ನಿನ್ನ ಕೈಲಿದೆ. ತಾಪತ್ರಯ ಗಳಿಂದ ನರಳುತ್ತಿದ್ದೀಯೆ. ನೀನೂ ಮಲ್ಲನ ಇನ್ನೂ ಹತ್ತು ಸಂಸಾರಗಳೂ ಸುಖವಾಗಿ ಜೀವನ ಮಾಡಿಕೊಳ್ಳಬಹುದು ಒರಟಾಟವನ್ನು ಆಡಬೇಡ. ಅತಿ ಮೂರ್ಖವು ಯಾರಿಗೂ ಒಳ್ಳೆಯದಲ್ಲ. ಹೀಗೆ ಎಷ್ಟೋ ಜನ ಕೆಟ್ಟದ್ದಾರೆ. ತಾನಾಗಿ ನೇಣು ಹಾಕಿಕೊಂಡು ಆಯುಷ್ಯದ ಪರಿಮಿತಿಯನ್ನು ನೋಡಬೇಡ. ಈ ವಾದವು ಸರಿಯಲ್ಲ. ವೇದಾಂತದ ಕಂತೆಗಳು ನನಗೆ ಮಾತ್ರ ತಿಳಿಯದೆಂದು ಯೋಚನೆ ಮಾಡಿದೆಯಾ?"

"ವೇದಾಂತವು ಎಲ್ಲರಿಗೂ ಹೇಳಲು, ಸುಲಭ ನಡೆಯುವುದಕ್ಕೆ ಸಾಧ್ಯವಲ್ಲ. ನುಡಿದಂತೆ ನಡೆಯುವುದೂ ನಡೆದಂತೆ ನುಡಿಯುವುದೂ ನಿಜವಾದ ವೇದಾಂತ. ಹಾಗಿರುವಾತನು ಸ್ವಸುಖವನ್ನೇ ಬಯಸುವುದಿಲ್ಲ. 'ಪರೋಪಕಾರಾರ್ಥಮಿದಂ ಶರೀರಂ' ಎಂದು ದೃಢ ಮಾಡುತ್ತಾನೆ. ಹೀಗಿರುವಾತನೇ ಯೋಗಿ. ಶರೀರ ಪೋಷಣೆಯೇ ಮುಖ್ಯವೆಂದಿರುವವನು. ಲೋಕ ಸೇವೆಯನ್ನು ಮಾಡಲಾರ. ಲೋಕಸೇವೆಯ ಪರಮ ರಹಸ್ಯವೇ ವೇದಾಂತದ ತಿರುಳು. ಅದನ್ನು ಸವಿಯುತ್ತಾ ತನ್ನ ಶಾಶ್ವತ ಸುಖವನ್ನು ಬಯಸಬೇಕಾದುದು ಮಾನವನ ಕರ್ತವ್ಯ. ಲೋಕವೇ ತಾನೆಂದೂ ತಾನೇ ಲೋಕವೆಂದೂ ನಂಬುವುದೀಗ ಯೋಗ ರಹಸ್ಯ. ಯೋಗವನ್ನು ಬಿಟ್ಟು ಭೋಗಾಪೇಕ್ಷೆಯು ಬರುತ್ತಲೇ ಜನ್ಮ ಕಾರಣವಾಗುತ್ತದೆ. ಅದನ್ನು ತಪ್ಪಿಸಿಕೊಳ್ಳಲು ಕೆಲಸ ಮಾಡುವಾತನು ಬ್ರಹ್ಮಜ್ಞಾನಿ ಅಥವಾ ಅಪರೋಕ್ಷಜ್ಞಾನಿ. ಭಾವಾ! ನಮ್ಮ ಬುದ್ಧಿಯು ಎಷ್ಟು ದಿನಗಳವರೆವಿಗೆ ಇಹದ ತೊಡಕುಗಳಲ್ಲಿರುವುದೊ ಅಲ್ಲಿಯವರೆವಿಗೆ ಶಾಶ್ವತಾನಂದದ ಹಂಬಲವು ನಮಗೇಕೆ?"

"ನೀನು ಭಾಗವತವನ್ನು ಬರೆಯುವುದೂ ಒಂದು ತೊಡಕೇ ಅಲ್ಲವೆ? ಅದನ್ನು ಬಿಟ್ಟುಬಿಡು."

"ಐಹಿಕ ಸುಖಾಭಿಲಾಷೆಯಿಂದಲಾಗಲಿ 'ಅಹಂ'ಕಾರದಿಂದಲಾಗಲಿ ಬರೆದರೆ ಹಾಗೆಯೇ ಸರಿ! ಲೋಕ ಸೇವೆಗಾಗಿ ಮಾಡುವ ಕಾರ್ಯಗಳಲ್ಲಿ ಸ್ವಾಭಿಮಾನವು ಕೂಡದು."

"ಹಾಗಾದರೆ ರಾಜಾಧಿರಾಜರೂ ಅಧಿಕಾರ ವರ್ಗದವರೂ ನರಕವನ್ನು ಹೊಂದು ವರೆಂದು ನಿನ್ನ ಮತವೊ?"

"ಇದೀಗ ರಹಸ್ಯವಾದ ವಿಚಾರ. ವಿಷ್ಣುವಿನ ಅಂಶವುಳ್ಳಾತನು ಮಾತ್ರ ರಾಜನಾಗುತ್ತಾನೆ. ತನ್ನ ಪ್ರಜೆಗಳ ಸುಖವೇ ತನ್ನ ಸುಖವೆಂದು ಕೆಲಸ ಮಾಡುತ್ತಾನೆ. ದೇಶ ಹಿತಕ್ಕಾಗಿ ಆತನು ಶರೀರವನ್ನು ಕೊಡುವುದಕ್ಕೂ ಹಿಂದೆಗೆಯುವುದಿಲ್ಲ. ದೇವರ ಸಾಕ್ಷಾತ್ತಾಗಿ ಬಂದು ಎಲ್ಲಿಯೂ ನಿಲ್ಲುವುದಿಲ್ಲ. ಅದರಿಂದಲೇ ಆತನಿಗೆ ರೂಪನಾಮಕ್ರಿಯಾ ಹೀನನೆಂಬ ಬಿರುದು. ಯಾವುದೋ ರೂಪದಿಂದ ಎಲ್ಲರ ಸೇವೆಯನ್ನೂ ಮಾಡುತ್ತಿರುವಾತನೇ ದೇವರು. ಅಧಿಕಾರ ವರ್ಗವೂ ಇದರಂತೆಯೇ! ಪೂರ್ವ ಜನ್ಮ ಸುಕೃತ ವಿಶೇಷದಿಂದ ಲೋಕಸೇವೆಯ ಅರ್ಹತೆಯನ್ನು ಪಡೆದು ಮಹಾವಿಷ್ಣುವಿನ ದೂರದ ಸಂಬಂಧವನ್ನೋ ಸಮೀಪ ಸಂಬಂಧವನ್ನೋ ಪಡೆಯುತ್ತಾನೆ. ದೊರೆಯನ್ನು ಆನಂದಪಡಿಸಬೇಕೆಂಬುದು ಈತನ ಮತ. ದೊರೆಯ ಆನಂದವೇ ಲೋಕದ ಆನಂದ! ಎಲ್ಲರ ಆನಂದವನ್ನೂ ತಾನು ನೋಡಬೇಕಾದರೆ ನಿಸ್ಪೃಹನಾಗಬೇಕು. ಹಾಗಿಲ್ಲದಿದ್ದರೆ ಇತರರಿಗೂ ಆತನಿಗೂ ಯಾವ ವ್ಯತ್ಯಾಸವೂ ಇರುವುದಿಲ್ಲ. ಇತರರಿಗಿಂತ ಹೆಚ್ಚು ಫಲವನ್ನು ಪಡೆದಿರುವಾತನೇ ಅಧಿಕಾರಿ! ಬಂದ ಅಧಿಕಾರವನ್ನು ಸ್ವಾರ್ಥತೆಯಿಂದ ಕಳೆದುಕೊಳ್ಳತಕ್ಕವನು ಮೂಢ. ಮೂಢನಿಂದ ಲೋಕಕ್ಕೆ ಸುಖವಿಲ್ಲ; ತನಗೆ ಸಂತೋಷವಿಲ್ಲ. ಇದೀಗ ರಹಸ್ಯ."

"ನಿನ್ನ ಅಭಿಪ್ರಾಯದಂತೆ ಸಿಂಗನಭೂಪಾಲನು ವಿಷ್ಣು ಅಂಶವನ್ನು ಹೊಂದಿದವನಲ್ಲವೆ? ಆತನಿಗೆ ಅಂಕಿತ ಹಾಕು?"

"ಈ ನಿರ್ಬಂಧ ಮಾಘ ಸ್ನಾನದಿಂದ ಆಗುವ ಲಾಭವೇನು?"

"ಹದಿನಾರುಗ್ರಾಮಗಳ ಜಹಗೀರಿ! ಇಷ್ಟು ಸಾಲದೊ? ಇನ್ನೂ ಏನು ಅಪೇಕ್ಷೆಯಿದೆಯೋ ಹೇಳು?"

"ನನ್ನ ಲಾಭಕ್ಕೆ ಹೇಳಲಿಲ್ಲ. ಅರವತ್ತು ಗ್ರಾಮಗಳನ್ನು ಕೊಟ್ಟರೂ ನನಗೆ ಬೇಕಾದುದು ಅರ್ಧ ಸೇರು ಅಕ್ಕಿ. ಅದೂ ದೊರೆಯದೆ ಇದ್ದರೆ ಪಾಪವಾಗಲಿ! ಕಡೆಗೆ ಗಂಗಾ ತೋಯದಿಂದಾದರೂ ತೃಪ್ತಿಯಾಗುತ್ತದೆ. ಹದಿನಾರು ಗ್ರಾಮಗಳಿಂದ ಎಷ್ಟು ಶರೀರಗಳು ಪೋಷಣೆಯಾಗುವುವು? ಅದನ್ನು ಸ್ವಾರ್ಥ ಬುದ್ಧಿಯಿಂದ ನಾನು ಉಪಯೋಗಿಸಿಕೊಂಡರೆ ಕಳ್ಳನಲ್ಲವೆ? ಈ ಕಳ್ಳತನದಿಂದ ನನಗೆ ಬರುವುದು ಸಹಿಸಲಾಗದ ತೊಂದರೆಯೇ ಅಲ್ಲವೆ? 'ಅರ್ಥಾನಾಮಾರ್ಜನೇ ದುಃಖಂ | ಅರ್ಜನಾನಾಂಚ ರಕ್ಷಣೇ! ನಾಶೇ ದುಃಖಂ ವ್ಯಯೇ ದುಃಖಂ ಅರ್ಥೋ ದುಃಖಸ್ಯಭಾಜನಂ ||" ಎಷ್ಟು ಕಷ್ಟವೇ ಬರಲಿ ಇತರರನ್ನು ಹಿಂಸಿಸುವ ಈ ದ್ರವ್ಯವು ನನಗೆ ಸ್ವಪ್ನದಲ್ಲಿಯೂ ಬೇಡ.

"ನಿನ್ನ ಮಗನ ಲಗ್ನವನ್ನಾದರೂ ಮಾಡಬೇಕೋ ಇಲ್ಲವೊ? ಈ ಯೋಚನೆಯು ನಿನ್ನ ಮನಸ್ಸಿಗೆ ಬರಲಿಲ್ಲವೊ?"

"ಬಂದು ಮಾಡುವುದೇನು ? ಎಲ್ಲವೂ ಶ್ರೀರಾಮಚಂದ್ರಮೂರ್ತಿಯಿಂದಾಗ ಬೇಕು. ನಾವು ಕಾರಣರು ; ಇಚ್ಛೆಯೂ ಫಲವೂ ದೈವಾಧೀನವು. ಈ ರಹಸ್ಯವನ್ನು ತಿಳಿಯದವರು ಕತ್ತೆಯು ಕಸ್ತೂರಿಯನ್ನು ಹೊತ್ತಂತೆ ಕೆಲಸ ಮಾಡುತ್ತಾರೆ. ನಮ್ಮ ಸುಖ ಸಂತೋಷಗಳೂ ದೈವೇಚ್ಛೆಯೇ ! ನಾವೇ ಕಾರಣರೆಂದು ಹೇಳುತ್ತಿರು ವುದೇ ಮಾಯೆ."

"ನಿನಗೆ ಹೇಳಬೇಕಾದರೆ ಆ ಬ್ರಹ್ಮನೇ ಎದ್ದು ಬರಬೇಕು. 'ಉಪದೇಶೋಹಿ ಮೂರ್ಖಾಣಾಂ'.........."

"ಹೌದು, ಮೂರ್ಖರ ಉಪದೇಶವು ಹಾಗೆಯೇ ಇರುವುದು. ಆಹ್ವಾನ ವಿಲ್ಲದ ಔತನ, ಅಗತ್ಯವಿಲ್ಲದ ಬೋಧೆ, ಇವು ಲೋಕ ವಿರೋಧ. ತಾವು ಈ ಮೂಢನ ಸಂಗಡ ಮಾತನಾಡದಿರುವುದರಿಂದ ಉಭಯರಿಗೂ ಸುಖ. ತಮ್ಮ ಆಗಮನದಿಂದಾದ ಸಂತೋಷವನ್ನು ವಾದದಿಂದ ಲಯವಾಗುವಂತೆ ಮಾಡಬೇಡಿ. ಇಷ್ಟೇ ನನ್ನ ಪ್ರಾರ್ಥನೆ."

ಶ್ರೀನಾಥನು ನಿರುತ್ತರನಾದನು. ಲಕ್ಷ್ಮಿಯು ಇದನ್ನೆಲ್ಲಾ ಮರೆಯಲ್ಲಿ ಕೇಳು ತ್ತಿದ್ದಳು. ಫಲಿತಾಂಶವು ತನ್ನ ಇಷ್ಟದಂತೆ ಆಗಲಿಲ್ಲವೆಂದು ನಿರ್ಧರ ಮಾಡಿದಳು. ಕಂಬನಿಗಳು ತಾವಾಗಿಯೇ ಉದುರುತ್ತಿದ್ದುವು. ಮನೆಯೊಳಕ್ಕೆ ನಿಧಾನವಾಗಿ ಹೋದಳು. ಶ್ರೀನಾಥನೂ ಹೊರಗೆ ಬಂದನು. ಅಕ್ಕನಿಗೆ ಏನು ಹೇಳಬೇಕೆಂಬುದೇ ಆತನಿಗೆ ತೋರದೆ ಮಗಳನ್ನು ಊರಿಗೆ ಕರೆದುಕೊಂಡು ಹೋಗುವುದನ್ನು ನಿರ್ಧರಿಸಿ ದನು. ಅಕ್ಕನಿಗೂ ಹೇಳಿದನು. ಲಕ್ಷ್ಮಿಗೆ ಆಕಾಶವೇ ಮೇಲೆ ಬಿದ್ದಂತಾಯಿತು. ಶಾರದೆಗೂ ವಿಷಯವು ತಿಳಿದು ವ್ಯಸನವಾಯಿತು. ಮಲ್ಲನನ ಮುಖವೇ ವಿವರ್ಣ ವಾಯಿತು. ದನಗಳ ಮೇವನ್ನು ಕತ್ತರಿಸುತ್ತಿದ್ದವನು ಎಲ್ಲವನ್ನೂ ಅದರ ಮುಂದೆ ಬಿಸಾಡಿ ಹೊರಟುಹೋದನು. ಶ್ರೀನಾಥನ ಪ್ರಯಾಣವು ಸಿದ್ಧವಾಗಿ 'ಶಾರದಾ' ಎಂದನು. ಆ ಮಗುವಿಗೆ ಅತ್ತೆ ಮಾವಂದಿರನ್ನು ಬಿಟ್ಟುಹೋಗಲು ಮನಸ್ಸೇ ಇಲ್ಲ. ತಂದೆಯ ಮಾತನ್ನು ಮೀರುವುದು ಲೋಕ ಹಿತವಲ್ಲ. ಹೀಗಾಗಿ ಕಣ್ಣೀರು ಸುರಿ ಸುತ್ತಾ ಅತ್ತೆಯ ಪಾದಗಳಿಗೆ ನಮಸ್ಕಾರ ಮಾಡಿದಳು. ಉಭಯರಿಗೂ ಗದ್ಗದ ಕಂಠವಾಯಿತು. ಹೇಗೂ ತನ್ನ ಆಶೆಗಳು ಫಲಿಸುವುದಿಲ್ಲವೆಂದು ಲಕ್ಷ್ಮಿಯು 'ಅಮ್ಮಾ ! ಸುಖವಾಗಿ ಹೋಗಿ ಬಾ' ಎಂದು ಆಶೀರ್ವಾದ ಮಾಡಿದಳು. ಪೋತನ ದೇವರ ಹತ್ತಿರ ಕುಳಿತಿದ್ದನು. ಅಲ್ಲಿಗೂ ಬಂದಳು ಶಾರದೆ. ಖಿನ್ನವದನಳಾಗಿ ಮಾವನಿಗೆ ನಮಸ್ಕರಿಸಿದಳು. "ಶ್ರೀರಾಮಚಂದ್ರನ ಅನುಗ್ರಹವು ನಿನ್ನಮೇಲೆ ಪೂರ್ಣ ವಾಗಿರಲಿ" ಎಂದು ಆಶೀರ್ವಾದವಾಯಿತು. ಇಬ್ಬರಿಗೂ ಗದ್ಗದ ಕಂಠ ! ಇನ್ನು ಮಲ್ಲನನಿಗೆ ಹೇಳಬೇಕು. ಹೇಗೆ ಹೇಳುವುದೆಂದು ಆತನಿದ್ದ ಕೊಠಡಿಯ ಬಳಿಗೆ

ಬಂದಳು. ಆತನು ತಡೆಯಲಾಗದ ಚಿಂತೆಯಿಂದ ಹೊರಗೆ ಹೋಗಿಬಿಟ್ಟನು. ಕಮಲೆಯು ಹಿಂದೆ ಬಿದ್ದಳು. ಅತ್ತಿಗೆಯ ಮುಖವನ್ನು ನೋಡಿ ಆಕೆಗೆ ಏನೋ ಚಿಂತೆಯೆಂದು ಭಾಸವಾಯಿತು. 'ಅತ್ತಿಗೇ! ನಿನ್ನನ್ನು ಯಾರೇನೆಂದರು ಬಾ! ಅಪ್ಪನಿಗೆ ಹೇಳೋಣ' ಎಂದು ಹಿಡಿದೆಳೆದಳು. ಶಾರದೆಯು ಕಣ್ಣೀರೊರಸುತ್ತಾ "ಯಾರೂ ಏನೂ ಅನ್ನಲಿಲ್ಲ, ಮಗೂ! ನಾನು ಊರಿಗೆ ಹೋಗುತ್ತೇನೆ" ಎಂದಳು. ಇಬ್ಬರೂ ಅಳಲಾರಂಭಿಸಿದರು. ಹೇಗೂ ನಿರ್ವಾಹವಿಲ್ಲದೆ ಹೊರಟಳು. ಕಮಲೆಯು ತಾನೂ ಬರುತ್ತೇನೆಂದು ಮೇನಾವರೆಗೂ ಹೋದಳು. ಯಾರ ಯತ್ನವೇನಿದೆ? ಲಕ್ಷ್ಮಿಯು ಮಗಳನ್ನು ಹಿಂದಕ್ಕೆ ಕರೆದುಕೊಂಡಳು. ಯಾರ ಮುಖದಲ್ಲಿಯೂ ಕಳೆಯೇ ಇಲ್ಲ. ಇಂತಹ ಸಂತಾಪವನ್ನು ಪರಿಹಾರ ಮಾಡತಕ್ಕವರು ಯಾರು?

ಸೊಸೆಯು ಹೊರಟುಹೋದುದೇ ಲಕ್ಷ್ಮಿಗೆ ಚಿಂತೆಯು ಹೆಚ್ಚಿತು. ಆಕೆಯು ಕೋದಂಡರಾಮನನ್ನು ಉದ್ದೇಶಿಸಿ, 'ಹೇ ದಯಾಸಿಂಧೋ! ಕೋದಂಡರಾಮಾ! ನೀನು ಅನನ್ಯ ಶರಣ್ಯನೆಂದು ಯಾವ ಹೊಗಳುಭಟರು ಹೇಳಿದರು? ಯಾರನ್ನು ಸದುದ್ದಿಶ್ಯದಿಂದ ಕಾಪಾಡಿರುವೆ? ನಿನ್ನನ್ನು ನಂಬಿದವರಿಗೆ ಸಹಿಸಲಾಗದ ತೊಂದರೆಗಳೇ ಅಲ್ಲವೆ? ಸಹಧರ್ಮಿಣಿಗೆ ವನವಾಸವನ್ನು ಮಾಡಿಸಿದೆ. ಕೌಸಲ್ಯೆಯ ಗೋಳನ್ನು ಆನಂದದಿಂದ ಕೇಳಿದೆ; ತಂದೆಯ ಪ್ರಾಣವನ್ನೇ ತೆಗೆದೆ. ಸುಗ್ರೀವನನ್ನು ಯುದ್ಧದಲ್ಲಿ ನರಳಿಸಿದೆ. ಧನುರ್ಧಾರಿಯಾದ ನಿನಗೆ ಕರುಣವೆಲ್ಲಿಯದು? ಈ ಕಲಿಯುಗದಲ್ಲಿ ತಾನೇ ಯಾರು ನಿನ್ನನ್ನು ನಂಬಿ ಬದುಕಿರುವರು? ಒಬ್ಬರನ್ನು ಹೇಳು" ಎಂದು ಯೋಚಿಸುತ್ತಾ ಮತ್ತೆ ಎಚ್ಚರಗೊಂಡವಳಾಗಿ ತನ್ನ ಗ್ರಹಚಾರವನ್ನು ತಾನೇ ತಿಳಿದುಕೊಳ್ಳುತ್ತಾ "ಅಯ್ಯೋ! ಅಪಚಾರ ಮಾಡಿದೆನು ದೇವಾ! ನಿನ್ನಂತಹ ಭಕ್ತಪರಾಧೀನರು ಯಾರಿದ್ದಾರೆ? ಶತೃ ಪಕ್ಷದವನೆಂದು ತಿಳಿದು ಅಂಗದಾದಿಗಳು ಬೇಡವೆಂದರೂ ಶರಣಾಗತನಾದ ವಿಭೀಷಣನಿಗೆ ಪಟ್ಟವನ್ನು ಕಟ್ಟಿದೆ. ಇನ್ನೂ ರಾಜ್ಯವೇ ಕೈಸೇರಲಿಲ್ಲ; ಆಗಲೇ ಪಟ್ಟವೆಂದರೇನು, ಎಂದು ಕೇಳಿದವರಿಗೆ ಅಯೋಧ್ಯೆಯಲ್ಲಿ ಅರ್ಧವನ್ನು ಕೊಡುವೆನೆಂದು ಹೇಳಲಿಲ್ಲವೆ? ಇದೊಂದು ಸಾಲದೆ ನಿನ್ನ ಕರುಣಾರಸ ಪ್ರದರ್ಶನಕ್ಕೆ! ಮಹಾನುಭಾವಾ! ನಮ್ಮ ಹಂಬಲವು ನಿನ್ನ ಕಿವಿಗೇಕೆ ಬೀಳಲಿಲ್ಲ? ಅದಕ್ಕೆ ಅಡ್ಡಿ ಯಾರು? ಆಂಜನೇಯನಿಗೆ ತತ್ವೋಪದೇಶವನ್ನು ಮಾಡುತ್ತಿರುವೆಯಾ? ಸೀತಾವಿರಹದ ಕಥೆಗಳನ್ನು ತಮ್ಮಂದಿರಿಗೆ ಹೇಳುತ್ತಿರುವೆಯಾ? ನನ್ನ ಪ್ರಾರ್ಥನೆಯೊಂದನ್ನು ಕೇಳು; ಮಲ್ಲನನ ಲಗ್ನವನ್ನು ನೆರವೇರಿಸು. ಅಯ್ಯೋ! ಶಾರದೆಯು ಮತ್ತೆ ನಿನ್ನ ಪೂಜೆಯನ್ನು ಮಾಡುವದೆಂದು? ಆಕೆಯಲ್ಲಿ ವೈರವೆ? ನಿನ್ನ ಅಲಂಕಾರ ಕಾರ್ಯಗಳನ್ನು ಮಾಡುವುದರಲ್ಲಿ ಎಷ್ಟು ಆಸಕ್ತಳಾಗಿದ್ದಳು. ಆರತಿಯನ್ನು ಬೆಳಗುವರು ಯಾರು? ಎಂದು ಮತ್ತೆ ಮೂರ್ಛೆಯನ್ನು ಹೊಂದಿದಳು. ಅಷ್ಟರಲ್ಲಿ ಒಂದು ಪ್ರಕಾಶವು ಕನಸಿನಲ್ಲಿ ಕಂಡಂತಾಗಲು – ಎಚ್ಚರಗೊಂಡಳು.

ಆ ಪ್ರಕಾಶವು ಸ್ತ್ರೀ ರೂಪದಿಂದ ' ಅಮ್ಮಾ ! ಚಿಂತಿಸಬೇಡ ನಿನ್ನ ಸಕಲ ಇಷ್ಟಾರ್ಥಗಳೂ ಕೈಗೂಡುವುವು'' ಎಂದು ಕೇಳಿಸಿತು. ನಿರುತ್ತರಳಾದಳು. ಮಾತನಾಡಲು ಆಗದಂತಾಯಿತು. ಸುತ್ತಲೂ ನೋಡಿದಳು ಯಾರಿದ್ದಾರೆ ? ಎಲ್ಲವೂ ಬಯಲೇ ! ಇದೊಂದು ಆಶ್ಚರ್ಯವೇ ಅಲ್ಲವೆ ?

ಭಾಗವತ ರಚನೆಯು ಸಾಕೆನ್ನಿಸುತ್ತಲೇ ಪೋತನನು ದೇವರಿಗೆ ಮಂಗಳಾರತಿಯನ್ನು ಮಾಡಿದನು. ಕಮಲೆಯು ತಂದೆಯ ಹತ್ತಿರದಲ್ಲೇ ಇದ್ದವಳು. ಆನಂದದಿಂದ ದೇವರಿಗೆ ಆರತಿಯನ್ನು ಮಾಡಿದಳು. ಎಲ್ಲವೂ ಮುಗಿದಮೇಲೆ ಮಲ್ಲನ ಮೆಲ್ಲಗೆ ಬಂದನು. ಆತನಿಗೂ ತೀರ್ಥವು ದೊರಕಿತು. ಇಂದು ಶಾರದೆಯಿಲ್ಲ. ಆರತಿಯನ್ನು ಕಮಲೆಯೊಬ್ಬಳೇ ಮಾಡಬೇಕಾಯಿತು. "ರಾಮಾ ! ನಿನ್ನ ಇಷ್ಟವು ಹೇಗಿದ್ದಿತೋ ಹಾಗೆ ನಡೆಯಿತು. ನನಗೇಕೆ ಅದರ ಚಿಂತೆ ?" ಅಂದನು ಪೋತನ. ಮಲ್ಲನನಿಗೆ ಮುಖದ ಕಳೆಯು ತಗ್ಗಿತು. ನಿಧಾನವಾಗಿ ಹೊರಟೇಹೋದನು. ಶಾರದೆಯೆಂದರೆ ಆತನಿಗೆ ಪಂಚಪ್ರಾಣ. ಆಕೆಯು ಅಂತಹ ಜಾಣೆ. ಶೀಲದಿಂದ ಮೆರೆಯುವಳು. ಇಂತಹವಳಲ್ಲಿ ಮಾವನಿಗೆ ತಾನೇ ವಿಶ್ವಾಸವಿಲ್ಲವೆ ? ಲಕ್ಷ್ಮಿಯ ಆನಂದವು ಮಿತಿಮೀರಿದ್ದಿತು. ಆಕೆಯು ದೇವರ ಬಳಿಗೇ ಬರಲಿಲ್ಲ. ಮಕ್ಕಳೊಡನೆ ಪೋತನ ಹೊರಗೆ ಬಂದು ಲಕ್ಷ್ಮಿಯ ಮುಖ ಭಾವವನ್ನು ನೋಡಿ,

"ಲಕ್ಷ್ಮೀ ! ಅಡಿಗೆ........ಏನೋ ವ್ಯಥೆಯಲ್ಲಿರುವಂತಿದೆ. ಅದೇಕೆ ವ್ಯಥೆ ? ಪ್ರಾರಬ್ಧ ಕರ್ಮವು ಅನುಭವಿಸಿದಲ್ಲದೆ ತಪ್ಪುವುದೇ ಇಲ್ಲ."

"ಯಾರಿಗೆ ವ್ಯಥೆ ? ನಾನು ಆನಂದದಲ್ಲಿದ್ದೇನೆ. ಹೇಗೂ ಕಾರ್ಯವಾಗುವುದಿಲ್ಲವೆಂದು ನಿರ್ಣಯವಾದಮೇಲೆ ವ್ಯಥೆಪಡುವ ಮೂಢರೂ ಇರುವರೆ ? ನಮ್ಮ ಪ್ರಾಪ್ತಿ ಮಲ್ಲನನ ಅದೃಷ್ಟವನ್ನು ತಿರುಗಿಸುವರು ಯಾರು ?"

"ಅದನ್ನು ರಾಮನು ತಿರುಗಿಸುವನು.''

"ನಿಮ್ಮ ಮರುಳಾಟದ ಮದುವೆಯೇ ಇದು."

"ನನ್ನ ಮದುವೆಯೇ ಮರುಳು. ಈಗ ನೀನು ವಿವೇಕದ ಮದುವೆಯನ್ನು ಮಾಡು."

"ನಿಮಗೇ ! ಇನ್ನೊಂದು ಮದುವೆಯೇ ? ನಾಚಿಕೆಯಾಗುವುದಿಲ್ಲವೆ ? ಎಳೆಗೂಸಿನಂತೆ ಮಾತನಾಡುತ್ತೀರಿ.''

"ಎಳೇ ಮಗುವಿನ ಹಾಗಾಗುವುದಕ್ಕೇ ಇಷ್ಟು ಕಷ್ಟಪಡುವುದು. ನೀನೂ ಹಾಗೆಯೇ ಆಗು. ರಾಮನು ಕಾಪಾಡುತ್ತಾನೆ."

"ಕಾಪಾಡಿದ! ಕಾಪಾಡಿದ! ಆತನಿಗೆ ನಮ್ಮನ್ನು ಕಾಪಾಡುವುದಕ್ಕಿಂತ ಬೇರೆ ಕೆಲಸವೇ ಇಲ್ಲ."

"ಹೌದು ಲಕ್ಷ್ಮೀ! ಆತನು ಅನನ್ಯ ಶರಣ್ಯನು. ಭಕ್ತರ ಹೃದಯಾಂತರ್ಗತನು......."

"ಇನ್ನು ಸಾಕು ನಿಮ್ಮ ಪುರಾಣ. ಕೇಳಿ ಕೇಳಿ ಕಿವಿಗಳೇ ತೂತು ಬೀಳುತ್ತೆ."

ಹೀಗೆ ಮಾತನಾಡುತ್ತಾ ಎಲ್ಲರೂ ಅಡಿಗೆ ಮನೆಯೊಳಕ್ಕೆ ಬಂದರು. ಬಾಳೆಯೆಲೆಗಳಲ್ಲಿ ಸಕಲ ಪದಾರ್ಥಗಳೂ ಸಿದ್ಧವಾಗಿದ್ದುವು. ಲಕ್ಷ್ಮಿಗೆ ಆನಂದವಾಯಿತು. ಪೋತನನು ಮಂದಹಾಸದಿಂದ ಲಕ್ಷ್ಮೀ ಕಮಲೂ ನೀವಿಬ್ಬರೂ ಊಟಕ್ಕೆ ಕುಳಿತುಕೊಳ್ಳಿ. ಮಲ್ಲನಾ! ನೀನು ಈ ಯೆಡೆಯಲ್ಲಿ ಕುಳಿತುಕೋ ಎಂದನು. ಮೂವರಿಗೂ ಹಸಿವು ಬಹಳವಾಗಿದ್ದಿತು, ಕುಳಿತುಕೊಂಡರು. ಬಡಿಸುವವರು ಯಾರು? ಎಡೆಗಳು ಇನ್ನೆರಡು ಸಿದ್ಧವಾಗಿದ್ದುವು. ಒಂದರಲ್ಲಿ 'ಪೋತನ' ಕುಳಿತುಕೊಳ್ಳುವನೆಂದುಕೊಂಡರು. ಆತನು ಹಾಗೆ ಮಾಡಲಿಲ್ಲ. ಇವರಿಗೆ ಉಪಚಾರವನ್ನು ಹೇಳುತ್ತಿದ್ದನು. ಎಲ್ಲರಿಗೂ ಅಸಮಾಧಾನ. ಯಜಮಾನರನ್ನು ಬಿಟ್ಟು ಊಟ ಮಾಡುವುದು ನ್ಯಾಯವೆ? ಎಂಬ ಚಿಂತೆ. ಹಸಿವು ನಿಮಿಷ ಮಾತ್ರದಲ್ಲಿಯೇ ಅಡಗಿತು. ಒಂದು ತುತ್ತು ಅನ್ನವೇ ಹೊಟ್ಟೆಗೆ ಸೇರಿದ್ದು. ಅಮೃತಪಾನ ಮಾಡಿದಂತಾಯಿತು. ನಿಜವಾಗಿಯೂ ಅದು ಅಮೃತವೇ! ಶ್ರೀರಾಮಪ್ರಸಾದ! ವಿನಿಯೋಗವಾಗುವ ರೀತಿಯೇ ಒಂದು ವಿಧ. ಮನೆಯವರಿಗೆಲ್ಲಾ ವ್ಯಾಕುಲ! ಇದಲ್ಲವೇ ವಿಷ್ಣುಲೀಲಾ ವಿನೋದ! ಕೂಡಲೆ ಲಕ್ಷ್ಮಿಯು,

"ನೀವು ಮಾತ್ರ ಊಟಕ್ಕೆ ಕೂಡದೆ ನಮಗೆ ಉಪಚಾರ ಹೇಳುವುದೇ?"

"ಲಕ್ಷ್ಮಿ! ಶಾರದೆಯಿಲ್ಲದ ಊಟ ಊಟವೆ? ಆ ಮಗುವಿನ ವಿನಯ, ಶೀಲ, ಎಲ್ಲಾ ಮನಸ್ಸಿನಲ್ಲಿ ನಾಟಿಹೋಗಿದೆ."

ಈ ಮಾತನ್ನು ಕೇಳುತ್ತಲೇ ಊಟಗಳು ಮುಗಿದೇಹೋಯಿತು. ಲಕ್ಷ್ಮಿಗಂತೂ ಕೈಲಿದ್ದ ತುತ್ತು ಬಾಯಿಗೆ ಹೋಗಲೇ ಇಲ್ಲ. ಈ ವಿಚಿತ್ರ ವ್ಯಾಪಾರವನ್ನು ನೋಡಿ ಪೋತನ ತನ್ನ ಮನಸ್ಸಿನಲ್ಲಿ "ಆಹಾ! ಶ್ರೀರಾಮಚಂದ್ರನು ಎಂತಹ ಮಾಯಾಜಾಲವನ್ನು ಹೂಡಿದ್ದಾನೆ. ಶಾರದೆ ಯಾರು? ಇವರು ಯಾರು? ಇವರ ಪರಸ್ಪರ ಸಂಬಂಧಗಳು ಕಲ್ಪನೆಗಳೇ ಅಲ್ಲವೆ? ತಾವಾಗಿ ಮಾಡಿಕೊಂಡ ಕಲ್ಪನೆಯು ಆಹಾರಾಪೇಕ್ಷೆಯನ್ನೇ ದೂರ ಮಾಡಿತು. ಈಗ ಶರೀರವು ಬಳಲುವದಿಲ್ಲವೊ? ಕೃತಕ ಕಲ್ಪನೆಗಳಿಂದ ತುಂಬಿದ ಈ ಶರೀರವು ಪರಮಾತ್ಮನ ಭಕ್ತಿಗೆ ಸ್ಥಳ ಕೊಡುವುದೆ? ಶಾಶ್ವತಾನಂದದಾಯಕನಾದ ಶ್ರೀರಾಮನಲ್ಲಿ ಇಂತಹ ಅನನ್ಯ ಭಕ್ತಿಯನ್ನು ಹೃದಯ

ಭೂಮಿಯಲ್ಲಿ ತುಂಬಿದವರಿಗೂ ಇವರಂತೆಯೇ ಆಹಾರಾಪೇಕ್ಷೆಯು ದೂರವಲ್ಲವೆ ? ಅವರಿಗೆತಾನೇ ಆಯಾಸವೆಲ್ಲಿಯದು ?

ಎಂದು ಹೇಳುತ್ತಾ ದೇವರ ಮನೆಯೊಳಕ್ಕೆ ಹೋಗಿ ಭಾಗವತವನ್ನು ಬರೆಯಲು ಮೊದಲು ಮಾಡಿದನು. ಅದರಲ್ಲಿನ ವಿಚಾರಗಳು ಪ್ರತಿ ನಿಮಿಷದಲ್ಲಿಯೂ ಈತನ ಮನಸ್ಸನ್ನು ನಿರ್ಮಲ ಮಾಡುತ್ತಾ ಬಂದುವು. ಪರಾಪೇಕ್ಷೆಯು ತನ್ನ ಮಾರ್ಗ ಕಂಟಕವೆಂದು ವ್ಯಥವಾಯಿತು. ಅಮೃತ ಸೇವನೆಯಂತೆ ಹಸಿವು ಬಾಯಾರಿಕೆಗಳು ಲಯವಾಗುತ್ತಾ ಬಂದುವು. ಪುರಾಣವು ಆನಂದರೂಪದಿಂದ ಸಾಗುತ್ತಾ ಬಂದಿತು. ಏಕಶಿಲಾನಗರದ ಪವಿತ್ರತೆಯು ಅಷ್ಟಿಷ್ಟೆಂದು ಹೇಳತೀರದಂತಾಯಿತು.

ಶ್ರೀನಾಥ ಕವಿಯು ಮಗಳನ್ನು ಕರೆದುಕೊಂಡು ಊರಿಗೆ ಬಂದನು. ಆಕೆಗೆ ತಂದೆಯ ಮನೆಯ ಉಪಚಾರಗಳು ಬೇಸರವನ್ನೇ ಉಂಟುಮಾಡಿದುವು. ಸ್ನಾನ ಮಾಡಿಸಲು ದಾಸಿಯು ಬಂದರೆ "ಅಮ್ಮಾ! ನನಗೂ ಕೈಗಳಿವೆ" ಎಂದು ಹೇಳು ವಳು. ತನ್ನ ಕಾರ್ಯಗಳನ್ನೆಲ್ಲಾ ತಾನೇ ಮಾಡಿಕೊಳ್ಳುವಳು. ಇದನ್ನು ನೋಡಿ, ಕವಿಯ ಕಿರಿಯ ಹೆಂಡತಿಯು "ಇದೆಲ್ಲಾ ದರಿದ್ರದ ಚೇಷ್ಟೆಗಳು. ಎಲ್ಲಾ ಪೋತನನ ಪಾಠ" ಎಂದು ಮೂದಲಿಸುವಳು. ಐಶ್ವರ್ಯದ ಸೊಂಪು ಆ ಹುಡುಗಿಗೆ ಸರಿಹೋಗ ಲಿಲ್ಲ. ದೇವರ ಪೂಜೆ, ಮಂಗಳಾರತಿ, ಪ್ರಸಾದ ವಿನಿಯೋಗ, ಭಾಗವತ ಪುರಾಣ, ಇವು ಮನಸ್ಸಿನಲ್ಲಿ ಅಲ್ಲಾಡದಂತೆ ನಿಂತುಬಿಟ್ಟಿದ್ದುವು. ಮಲ್ಲನನು ಹಸುಗಳಿಗೆ ಮೇವು ಹಾಕುವುದು ತಾನು ಅರಿಶಿನ ಕುಂಕುಮವನ್ನಿಡುವುದು. ಕಮಲೆಯು ತನ್ನ ಸೆರಗನ್ನು ಹಿಡಿದು ಹಿಂದೆಯೇ ಬರುವುದು. ಮರೆಯಬೇಕೆಂದರೂ ಆಗಲಿಲ್ಲ ಇದರಿಂದ ಶ್ರೀನಾಥನಿಗೆ ತಾನೇ ತೃಪ್ತಿಯೆ? ಮಗಳನ್ನು ನೋಡುತ್ತಲೇ ಹಿರಿಯ ಹೆಂಡತಿಯ ನೆನಪು ಬಂದು ಕಣ್ಣೀರಿಡುವನು. ಆಕೆಯಲ್ಲಿದ್ದ ಸುಗುಣಗಳಂತಹುವು. 'ತಾಯಿ ಯಂತೆ ಮಗಳು' ಎಂಬ ನಾಣ್ನುಡಿಯನ್ನು ಸಾರ್ಥಕಪಡಿಸಿದ್ದಳು ಶಾರದೆ. ಸ್ವಭಾವವಾದ ಅಪರಂಜಿಗೆ ಸ್ವಲ್ಪ ಮೆರುಗಿಟ್ಟಂತೆ. ಪೋತನನ ಬೋಧೆಯು ಈಕೆಯ ಪ್ರಕಾಶವನ್ನು ಹೆಚ್ಚಿಸಿದ್ದಿತು. ಮಗಳೊಡನೆ ಏನೋನೋ ಮಾತನಾಡಬೇಕೆಂಬ ಆಶೆ ಶ್ರೀನಾಥನಿಗೆ. ಲಕ್ಷ್ಮಿಯಂತಹ ಪ್ರೇಮಸಾಗರವು ತನಗೆ ದೂರವಾಯಿತಲ್ಲಾ ಎಂಬ ಚಿಂತೆ ಶಾರದೆಗೆ. ಹೀಗಾಗಿ ಇಬ್ಬರ ಹೃದಯಗಳೂ ತಪಿಸುತ್ತಿದ್ದುವು.

"ಬಲ್ಲವನೇ ಬಲ್ಲ ಬೆಲ್ಲದ ಸವಿ" ಎಂಬಂತೆ. ಚಂದ್ರಿಕಾಮೋದವು ರಾಜರ ಚಿಂತೆಗಳನ್ನು ಹರಿಸತಕ್ಕದ್ದು. ಭಾಗವತದ ಹಂಬಲದಲ್ಲಿದ್ದ ಸಿಂಗನ ಭೂಪಾಲನು ಚಂದ್ರಶಾಲೆಗೆ ಬಂದನು. ಕೂಡಲೇ ಇದೇ ಬಯಕೆಯುಳ್ಳ ಶ್ರೀನಾಥಕವಿಯೂ ಅಲ್ಲಿಗೆ ಬಂದನು. ಬಾಗಲಿಗೆ ಬರುತ್ತಲೇ ಭೋಗಾಂಗನೆಯರು ತಮ್ಮ ಭರತ ನಾಟ್ಯ ವೈಭವದಿಂದ ಆರತಿಯನ್ನು ಮಾಡಿದರು. ವಂದಿ ಮಾಗಧರು ಪರಾಕುಗಳನ್ನು

ಹೇಳುತ್ತಿರಲು ಆತುರ ಆತುರವಾಗಿ ಬರುತ್ತಿದ್ದನು. ಶುಕ್ಲ ನವಮಿಯ ಚಂದ್ರನು ಈ ರಸಜ್ಞರಿಬ್ಬರನ್ನೂ ಔತನಕ್ಕೆ ಕರೆಯುವಂತೆ ಬೆಳಗುತ್ತಿದ್ದನು. ರಾಜ ದರ್ಶನವು ಕವಿಗೂ, ಕವಿ ದರ್ಶನವು ರಾಜನಿಗೂ ಹುಲಿಯ ಬಾಯಿಗೆಂದು ಹೋಗಿಬಂದ ಹಸು ವನ್ನು ನೋಡಿನ ಕರುವಿನಂತಾಯಿತು. ಇವರ ಅಟ್ಟಹಾಸವನ್ನು ಮುರಿಯಬೇಕೆಂದು ಬರುತ್ತಿರುವ ವೈರಿಗಳ ಗುಂಪೋ ಅನ್ನುವಂತೆ ಕಾರ್ಮೋಡಗಳು ಅಟ್ಟಬರುತ್ತಿದ್ದುವು. ಅವು ಚಂದ್ರನನ್ನು ನುಂಗಿದರೆ ತಮ್ಮ ಗತಿಯೇನೆಂದು ತಾರೆಗಳು ತಲ್ಲಣಿಸುತ್ತಾ ಕಳ್ಳರ ಬಲೆಯಲ್ಲಿ ಗುಂಪು ಗುಂಪಾಗಿ ಬೀಳುತ್ತಿದ್ದುವು. ಸುಖ ದುಃಖಗಳ ಸಮ್ಮೇ ಳನವನ್ನು ಚನ್ನಾಗಿ ನೋಡಿ ಎನ್ನುವಂತೆ ಮಧ್ಯೆ 'ಫಳಾ 'ರನೆ ಮಿಂಚು ! ದುರ್ಮಾರ್ಗ ರನ್ನು ಹೆದರಿಸುವ ರೀತಿಯೋ ಎಂಬಂತೆ ಗುಡುಗಿನ ಆಡಂಬರ. ಕಾಡಹರಟೆಗಳಿಂದ ಕಾಲ ಕಳೆಯುವ ಸೋಮಾರಿಗಳೇ! ಹೊರಡಿ ಹೊರಡಿ ಎಂಬಂತೆ ಮಳೆಯ ವೇಗ ! ಹೀಗಾಗಿ ಕವಿ ಮತ್ತು ರಾಜರಿಬ್ಬರೂ ತಮ್ಮ ಉದ್ದಿಶ್ಯವು ಸಫಲವಾಗದೆ ಮನೆಯೊಳಕ್ಕೆ ಬಂದರು. ಆಗ ರಾಜನು,

"ಭಾಗವತದ ವಿಚಾರವೇನಾಯಿತು ? ಪೋತನ ಸಿಕ್ಕಿದನೊ ?"

"ಸಿಕ್ಕದೆ ಹೋಗುವುದಾದರೂ ಎಲ್ಲಿಗೆ ? ಬೇಸಾಯಗಾರರ ವಿಚಾರ ಕೇಳಿ ದ್ದೀಯೋ ಇಲ್ಲವೊ ? ಕಡು ಮೂರ್ಖರು. ಕಷ್ಟವೇ ಅವರ ಹಣೆಬರಹ! ಕೂಪ ಕೂರ್ಮ ನ್ಯಾಯ. ವೇದಾಂತದ ಹಾಳೆಗಳನ್ನೆಲ್ಲಾ ಓದುವರು. ಮಾಡುವುದೇನು ? ಮೂರ್ಖಸ್ಯನಾಸ್ತ್ಯೌಷಧಂ."

"ಹಾಗಾದರೆ ಭಾಗವತವನ್ನು ನನ್ನ ಹೆಸರಿಗೆ ಅಂಕಿತ ಹಾಕುವುದಿಲ್ಲವೆಂದು ಅವನ ಹಠವೊ ?"

"ಹಟವೆಂದು ಹೇಳಲಾರೆ. ಕೇವಲ ಒರಟುತನ, ಕಪಿಮುಷ್ಟಿ, ಹೇಳಿದು ದನ್ನು ಗ್ರಹಿಸಲಾರದ ಮಂದ ಬುದ್ಧಿ."

"ಅದನ್ನೆಲ್ಲಾ ನಾನು ಕೇಳಲಾರೆ. ನನ್ನ ಸರ್ವಸ್ವವೂ ಭಾಗವತವೇ ! ಅದನ್ನು ಕೊಡದಿದ್ದರೆ...."

"ಏನು ಮಹಾಕಾರ್ಯ. ಮತ್ತೊಂದು ಭಾಗವತವನ್ನು ಬರೆಯಿಸಿದರಾಯಿತು."

"ಇಲ್ಲ, ಶ್ರೀನಾಥಾ! ತಿಳಿಯದವನಂತೆ ಸಮಾಧಾನ ಹೇಳುತ್ತೀಯೆ. ಕವಿತಾ ಪಾಕವು ಒಬ್ಬರದಿರುವಂತೆ ಮತ್ತೊಬ್ಬರದಿರುವುದೆ ? ಅಷ್ಟೇಕೆ ? ಒಬ್ಬನೇ ಒಂದು ಸಮಯದಲ್ಲಿ ಹೇಳಿದಂತೆ ಮತ್ತೊಂದುಸಲ ಹೇಳಬಹುದೆ ? ನನ್ನ ರಾಜ್ಯದಲ್ಲಿದ್ದು ಗ್ರಂಥವನ್ನು ಬರೆದಿರುವಾಗ ಅಂಕಿತ ಹಾಕಕೊಡದಿದ್ದರೆ ರಾಜಾಜ್ಞೆಗೆ ವ್ಯತಿರಿಕ್ತವಾಗಿ ನಡೆದವನಿಗಾಗುವ ಶಿಕ್ಷೆಯು ಅವನಿಗೆ ತಪ್ಪಿಡುದೇ ಅಲ್ಲ."

“ಯಾರನ್ನು ಶಿಕ್ಷಿಸಬೇಕು ? ಯಾರಿಗೆ ಆಜ್ಞೆಯನ್ನು ಮಾಡಬೇಕು ? ಎಂಬ ಅರಿವೇ ರಾಜನೀತಿಯಲ್ಲವೆ ? ಸಕಲ ಧರ್ಮಗಳನ್ನೂ ತಿಳಿದು ನೀನು ಒಂದು ಸಣ್ಣ ಗ್ರಂಥಕ್ಕಾಗಿ ಹಠವನ್ನು ಮಾಡುವುದೆ ? ಆಸ್ಥಾನದ ಕವಿಗಳೆಲ್ಲರೂ ಅವಿವೇಕಿಗಳೆಂದು ನಿನ್ನ ಅಭಿಮತವೊ ? ನಾವೆಲ್ಲರೂ ಹೊರಡುತ್ತೇವೆ. ಪೋತನನೊಬ್ಬನೇ ನಿನ್ನ ರಾಜ್ಯದಲ್ಲಿರಲಿ ! ಭಾಗವತವೊಂದೇ ಗ್ರಂಥವೇ ಸಾಕು.”

“ಹಾಗಲ್ಲ, ‘ಅಸಂತುಷ್ಟೋದ್ವಿಜೋ ನಷ್ಟಃ ಸಂತುಷ್ಟ ಇವ ಪಾರ್ಥಿವಃ !’ ಎಂಬ ಮಾತು ನನಗೆ ಗ್ರಂಥಗಳ ವಿಚಾರದಲ್ಲಿ ಅನ್ವಯಿಸಿದೆ. ಆತನ ಪಾಕವು ಎಷ್ಟು ಮನೋಹರ ‘ಶ್ರೀಕೈವಲ್ಯಪದಂಬು ಜೇರುಟಕುನ್ಕೈ’ ಎಂತಹ ಆನಂದ ! ಶಾಂತನಿಧಿಯೆಂದು ಹೊಗಳಿಸಿಕೊಳ್ಳುತ್ತಿರುವ ಪೋತನನು ನನ್ನ ವಿಷಯದಲ್ಲಿ ಕಠಿಣನೆ ? ನಿನಗೆ ಭಾವಮೈದುನನೆಂದೇ ಹೇಳಿದೆಯಲ್ಲಾ. ಹದಿನಾರು ಗ್ರಾಮಗಳ ಜಹಗೀರನ್ನು ಕೊಡುತ್ತೇನೆ. ಸಾಲದಿದ್ದರೆ ಇನ್ನೂ ಹತ್ತು ಗ್ರಾಮಗಳನ್ನು ಕೊಡುತ್ತೇನೆ. ಇನ್ನು ನನ್ನಿಂದಾಗಬೇಕಾದುದೇನು ?”

“ನಾನೇನು ಸುಮ್ಮನೆ ಬಂದೆನೆ ? ಬೇಕಾದಷ್ಟು ಆಶೆಯನ್ನು ಇಡಿಸಿದ್ದಾಯಿತು. ಶಾರದೆಯನ್ನು ಕೊಡುವುದಿಲ್ಲವೆಂದು ಕೂಡಾ ಹೇಳಿದ್ದಾಯಿತು. ಆದರೇನು ? ‘ನಿಸ್ಪೃಹಸ್ಯತೃಣಂ ಜಗತ್’ ಅನ್ನುವಂತಾಯಿತು. ನನ್ನ ಪ್ರಯತ್ನಗಳೊಂದೂ ಅವನ ಮುಂದೆ ನಡೆಯಲೇ ಇಲ್ಲ.

“ಮುಂದೆ ನಾಲ್ಕನೆಯ ಉಪಾಯವೇತಾನೇ ಇರುವುದು. ಅದು ನನ್ನಿಂದಾಗುವುದು.”

“ಅದನ್ನುಪಯೋಗಿಸಲು ಪೋತನ ಎಷ್ಟುಮಾತ್ರದವನು ? ಪ್ರಬಲ ವೈರಿಯೆ ?”

“ಆಜ್ಞೆಯನ್ನು ಪ್ರತಿಭಟಿಸುವುದಕ್ಕಿಂತಲೂ ವೈರವೆ ?”

“ಹಾಗಾದರೆ ಮತ್ತೊಂದುಸಲ ನಾನು ಪ್ರಯತ್ನ ಮಾಡುತ್ತೇನೆ. ಸಾಧ್ಯವೇ ಆಗದಿದ್ದರೆ ಪ್ರಭುಚಿತ್ತ. ಏನಾದರೂ ‘ಗುಬ್ಬಿಯಮೇಲೆ ಬ್ರಹ್ಮಾಸ್ತ್ರ’. ಆ ಮೂರ್ಖನೂ ರಾಮಚಂದ್ರನೆಂದೇ ಹಟವನ್ನು ಹಿಡಿದಿದ್ದಾನೆ. ರಾಮನೇ ತನ್ನ ಮನೆಯನ್ನು ಕಾಯುವಂತೆ ಮಾತನಾಡುತ್ತಾನೆ. ಯಾರೋ ಬೋಧೆಯನ್ನು ಚನ್ನಾಗಿ ಮಾಡಿದ್ದಾರೆ. ಅದನ್ನು ತಿರುಗಿಸುವುದು ಬಹಳ ಕಷ್ಟವೆಂದೇ ನನ್ನ ನಂಬುಗೆ. ಈ ಸಲ ಕವಿ ಸಹಸ್ರವನ್ನೇ ಕರೆದುಕೊಂಡು ಹೋಗುತ್ತೇನೆ. ಎಲ್ಲರಿಂದಲೂ ಹೇಳಿಸುತ್ತೇನೆ. ಯತ್ನವಿಲ್ಲದಿದ್ದರೆ........”

“ಮುಂದಿನ ವಿಚಾರವು ನನಗಿರಲಿ.”

ಹೀಗೆ ಮಾತನಾಡುತ್ತಿರುವಷ್ಟರಲ್ಲಿಯೇ ಮಳೆಯೂ ನಿಂತಿತು. ಶ್ರೀನಾಥನು ಭಾವನ ಗ್ರಹಚಾರವನ್ನು ಯೋಚನೆ ಮಾಡುತ್ತಾ ಮನೆಗೆ ಬಂದು ಊಟವನ್ನು ಮಾಡಿ ಮಲಗಿದನು. ರಾತ್ರಿಯೆಲ್ಲಾ ಇದೇ ಹಂಬಲವೇ! ನಿದ್ದೆಯೆಂದರೇನು? ಪೋತನನಿಗೆ ಹೇಳುವ ಸಮಾಧಾನ ಪರಂಪರೆಗಳು ಮನಸ್ಸಿಗೆ ಬರುವುವು. ಒಂದೊಂದು ಪ್ರಶ್ನೆಗೆ ಒಂದೊಂದು ಉತ್ತರವು ಆತನ ಮನಸ್ಸಿಗೇ ಬಂದುಬಿಡುವುದು. ಕಡೆಗೆ ಪ್ರಶ್ನೆಯೇ ಉಳಿಯದು. ಆಶೆಯು ಲೋಕವನ್ನೆಲ್ಲಾ ಆವರಿಸಿರುವಾಗ ಈತನನ್ನು ಮಾತ್ರ ಬಿಟ್ಟಿರುವುದಕ್ಕೆ ಕಾರಣವೇನು? ಎಂಬ ಹಂಬಲ. ಆಶೆಯು ದುಃಖಕ್ಕೆ ಮೂಲವೆಂಬ ತನ್ನದೇ ಒಂದು ಸಮಾಧಾನ. ಭಕ್ತಿರಸ ಪ್ರಭಾವಕ್ಕಾಗಿ ತಲೆದೂಗುವನು. ತನಗೆ ನಡೆದ ಉಪಚಾರಗಳಿಗಾಗಿ ಆನಂದ! ಶಾರದೆಯನ್ನು ಇದುವರೆವಿಗೂ ಕಾಪಾಡಿದ ಕೃತಜ್ಞತೆಯೇ ಬೇಡವೆ ಎಂಬ ಪರಿತಾಪ! ಕಡೆಗೆ ತನ್ನ ಆಟ್ಟಹಾಸವನ್ನೆಲ್ಲಾ ತೋರಿಸಬೇಕು. ಅಲ್ಲಿಗೂ ಯತ್ನವಿಲ್ಲದಿದ್ದರೆ ಗ್ರಂಥದಲ್ಲಿ ಒಂದು ತಪ್ಪು ಹಿಡಿದು ಅವನನ್ನು ದಾರಿಗೆ ತರಬೇಕು ಎಂದು ನಿರ್ಧರವಾಯಿತು. ಬೆಳಗಾಗುತ್ತಲೇ ನೂರಾರು ಮಂದಿ ಕವಿಗಳನ್ನು ಜತೆಯಲ್ಲಿ ಕರೆದುಕೊಂಡು ಶಾರದೆಗೆ ಅಮೋಘವಾದ ಆಭರಣಗಳಿಂದ ಅಲಂಕಾರ ಮಾಡಿಸಿ ದಿವ್ಯವಾದ ಪೀತಾಂಬರವನ್ನುಡಿಸಿ ತನ್ನ ಜತೆಯಲ್ಲಿ ಕರೆದುಕೊಂಡು ಪ್ರಯಾಣ ಮಾಡಿದನು.

## ಶ್ರೀರಾಮರ ಪ್ರತ್ಯಕ್ಷ

ಪೋತನನ ಭಾಗವತ ರಚನೆಗೆ ಯಾವ ಅಡ್ಡಿಯೂ ಇಲ್ಲ. ಅದು ಪ್ರವಾಹದಂತೆ ಹೋಗುತ್ತಿದ್ದಿತು. ಒಂದು ಮಧ್ಯಾಹ್ನ ಊಟಗಳಾದಮೇಲೆ ರಚನೆಗೆ ಕುಳಿತನು. ಒಂದು ಪದ್ಯವು ಮನಸ್ಸಿಗೆ ಬಂದಿತು. "ಅಲ ವೈಕುಂಠ ಪುರಂಬುಲೋ" ಎಂದು ಬರೆದನು. ಮುಂದೆ ಏನು ಬರೆಯಬೇಕೋ ತೋರದಂತಾಯಿತು. ಭೂಮಿಯನ್ನೂ ಆಕಾಶವನ್ನೂ ನೋಡಿದನು. ಬೆರಳುಗಳನ್ನು ಎಣಿಸಿ ತಲೆಯಲ್ಲಾಡಿಸಿದನು. ರಾಮಚಂದ್ರನ ವಿಗ್ರಹಗಳನ್ನು ನೋಡಿದನು. ಮನಸ್ಸಿಗೇನೋ ವ್ಯಾಕುಲ. ಕಮಲೆಯೊಬ್ಬಳು ಹತ್ತಿರದಲ್ಲಿದ್ದಳು. 'ಅಲ್ಲ ಅಲ್ಲ' ಎನ್ನುವನು. ಈತನ ಭಾವಗಳು ಹುಚ್ಚು ಹಿಡಿದವರಂತಿದ್ದುವು. ಇದೊಂದೂ ಕಮಲೆಗೆ ತಿಳಿಯದೆ 'ಅಪ್ಪಾ! ದೇವರಿಗೆ ಮಂಗಳಾರತಿ ಮಾಡೋಣವೆ?'' ಎಂದಳು. ಆ ಮಾತೇ ಪೋತನನ ಕಿವಿಗೆ ಬೀಳಲಿಲ್ಲ. ಮೇಲಕ್ಕೆದ್ದನು. ಮತ್ತೆ ಕುಳಿತು ಘಂಟವನ್ನು ಕೈಗೆ ತೆಗೆದುಕೊಂಡನು. ಏನು ಬರೆಯುವುದಕ್ಕೂ ತೋರದೆ, ಪುಸ್ತಕವನ್ನೂ ಘಂಟವನ್ನೂ ಕೆಳಗಿಟ್ಟು "ಅಮ್ಮಾ! ಕಮಲೂ ನೀನು ಇಲ್ಲಿಯೇ ಇರು, ನಾನು ಬರುತ್ತೇನೆ." ಎಂದು ಹೇಳಿ, ಹಿತ್ತಲಿನಲ್ಲಿದ್ದ ಒಂದು ಮರದ ಕೆಳಗೆ ಕುಳಿತನು. ಆತನಿಗೆ ಮೈಮೇಲೆ ಸ್ಮರಣೆ ತಪ್ಪಿತು.

ಶ್ರೀರಾಮಚಂದ್ರನ ಕರುಣಾಪ್ರಭಾವವನ್ನು ಇಷ್ಟೇ ಸರಿಯೆಂದು ನಿರ್ಣೈಸಬಲ್ಲ ಮಹಾಪುರುಷರೇ ಲೋಕದಲ್ಲಿಲ್ಲ. ಭಕ್ತರನ್ನು ಕಾಪಾಡಲು ಆತನು ಮನಸ್ಸು ಮಾಡದಿದ್ದರೆ ಇದುವರೆವಿಗೆ ಲೋಕದಲ್ಲಿ ವಿಗ್ರಹಾರಾಧನೆಯ ಹೆಸರೇ ಇಲ್ಲದಂತಾಗು ಗುತ್ತಿದ್ದಿತು ಭಕ್ತಿಯೆಂಬ ಎರಡು ನಕ್ಷತ್ರಗಳೂ ನಾಸ್ತಿಕವಾದಗಳೆಂಬ ಕಾರ್ಮೋಡ ಗಳಲ್ಲಿ ಲಯವಾಗಿ ಹೋಗುತ್ತಿದ್ದುವು. ಆತನು ಭಕ್ತರಿಗೆ ತೊಂದರೆಗಳನ್ನು ಕೊಡು ತ್ತಾನೆ. ಅವನ್ನೂ ಶಾಶ್ವತಗೊಳಿಸುವುದಿಲ್ಲ. ಕ್ಷಣದಲ್ಲಿಯೇ ಅವರಿಗೆ ಸಹಾಯ ಮಾಡಲು ತಾನೇ ತೊಂದರೆಪಡುತ್ತಾನೆ. ಇದು ನಮ್ಮ ಅನುಭವದ ಮಾತೇ ಆದರೂ ಯಾರೂ ನಂಬದಿರುವಂತೆ ಮಾಡುವುದೇ ಆತನ ಮಾಯೆ. ಕಬೀರನಿಗೆ ಸಾಧು ಸೇವೆಗೆ ಹಣವನ್ನು ಕೊಟ್ಟವರು ಯಾರು ? ರಾಮದಾಸನಿಗೆ ಆರು ಲಕ್ಷ ದ್ರವ್ಯವನ್ನು ಕೊಟ್ಟವರು ಯಾರು? ಇವರಿಗೆ ತೊಂದರೆಗಳನ್ನು ಕೊಡಲಿಲ್ಲವೆ ? ತಿಂಡಿಗೇ ಇಲ್ಲದಂತೆ ಅಲೆಯಿಸಲಿಲ್ಲವೆ ? ಎಷ್ಟೇ ಕಷ್ಟಗಳು ಬಂದರೂ ದೃಢವನ್ನು ಹೊಂದುವ ಸ್ವಭಾವವು ಜೀವಾತ್ಮನಿಗೆ ಬಂದಲ್ಲದೆ ಶ್ರೀರಾಮ ಸಾಕ್ಷಾತ್ಕಾರವಾಗುವುದೇ ಇಲ್ಲ. ಆ ಸ್ವಭಾವವು ಪ್ರತಿ ಜೀವಾತ್ಮನಿಗೂ ಉಂಟಾಗುವುದು ಲೋಕರೂಢಿಯಲ್ಲ. ಇದೀಗ ಪರಮ ರಹಸ್ಯ.

ನೀಲಮೇಘಶ್ಯಾಮನೂ ಕೋಮಲಕಾಯನೂ ಪೀತಾಂಬರಧಾರಿಯೂ ಶಂಖ ಚಕ್ರಗದಾಭೂಷಣನೂ ಆದ ಕೋದಂಡರಾಮನು, ಪೋತನನ ಮನೆಯ ಮುಂದಕ್ಕೆ ಬಂದನು. ಅತ್ತಿತ್ತ ನೋಡಿದನು. ಲಕ್ಷ್ಮಿಯು ಮನೆಯ ಕೆಲಸಗಳ ಲ್ಲಿದ್ದಾಳೆ. ಮಲ್ಲನ ಹೊಲಕ್ಕೆ ಹೋಗಿದ್ದಾನೆ. ಪೋತನನ ಅನುಮಾನ ಪರಿಹಾರ ಮಾಡುವುದೇ ಆತನ ಇಚ್ಛೆ. ಮಂದಗಮನದಿಂದ ದೇವರ ಮನೆಯ ಹತ್ತಿರಕ್ಕೆ ಬಂದನು. ಕಮಲೆಯು ಪುಸ್ತಕದ ಹತ್ತಿರ ಕುಳಿತಿದ್ದಾಳೆ. ಅವಳು ಕಾಣದಂತೆ ಬರೆಯುವುದೆಂದರೇನು ? ಈ ರೂಪದಿಂದ ಆಕೆಗೆ ದರ್ಶನವನ್ನು ಕೊಡುವುದೆ ? ಭಯದಿಂದ ಕಿರಿಚಿಕೊಂಡರೆ ಅನೇಕರು ಸೇರುವುದಿಲ್ಲವೆ? ಎಂಬ ಯೋಚನೆಯು ಬಂದೊಡನೆಯೇ ಪೋತನನಂತಾದನು. ಆತನ ಸ್ಥಿತಿಯು ಯಕ್ಷಣಿಗಾರನಂತಾ ಯಿತು. ಪೋತನನಿಗೂ ಈತನಿಗೂ ಯಾವ ಭಾಗದಲ್ಲಿಯೂ ವ್ಯತ್ಯಾಸವಿಲ್ಲದ ನಡೆ ನುಡಿ. ಆನಂದದ ನಗುವನ್ನು ಸೂಚಿಸುತ್ತಾ ಮನೆಯೊಳಕ್ಕೆ ಬಂದನು. ಪುಸ್ತಕ ವನ್ನು ಕೈಗೆ ತೆಗೆದುಕೊಂಡು ತಲೆಯನ್ನು ಅಲ್ಲಾಡಿಸುತ್ತಾ ಬರೆದನು. ' ನಗರಿಲೋ ನಾಮೂಲ ಸೌಧಂಬುದಾಪಲ ' ಎಂದು ಆನಂದವನ್ನು ಸೂಚಿಸಿದನು. ಪುಸ್ತಕಕ್ಕೆ ನಮಸ್ಕಾರ ಮಾಡಿದನು. ಕಮಲೆಗೆ ತಂದೆಯ ಇಷ್ಟವು ನೆರವೇರಿತೆಂದು ತಿಳಿಯಿತು. ಕೂಡಲೇ ' ಅಪ್ಪಾ ! ಈಗ ಪದ್ಯವು ಸರಿಹೋಯಿತೆ ?' ಎಂದಳು. ಆಗ ವ್ಯಕ್ತಿಯು ' ಅಮ್ಮಾ ಸರಿಹೋಯಿತು ?' ಎಂದು ಹೇಳುತ್ತಾ ಮಗುವಿನ ಶಿರವನ್ನಾಘ್ರಾಣಿಸಿ, ' ಬರುತ್ತೇನೆ ' ಎಂದು ಹೇಳಿ ಹೊರಟನು. ಕಮಲೆಗೆ ಆನಂದವು ಅತಿಯಾಯಿತು.

ದೇವರಿಗೆ ನಮಸ್ಕಾರ ಮಾಡಿದಳು. ಸ್ವಲ್ಪ ಹೊತ್ತಿನಲ್ಲಿ ನಿಜವಾದ ಪೋತನ ಬಂದನು. ಆತನು ಮರದ ಕೆಳಗೆ ಮಲಗಿದ್ದಂತೆಯೇ ಯೋಚನೆಯು ಹರಿದು ತನ್ನ ಮನಸ್ಸಿಗೆ ಬಂದ ಪದವನ್ನು ಬರೆದುಬಿಡೋಣವೆಂದು ಕಾಲುಗಳನ್ನು ತೊಳೆದು ಕೊಂಡು ದೇವರ ಮುಂದೆ ಕುಳಿತು ಪುಸ್ತಕವನ್ನು ಬಿಚ್ಚಿದನು. ಆನಂದವು ಮಿತಿ ಮೀರಿತು. ಅಶ್ರುಧಾರೆಗಳು ಉದುರಿದುವು. ಪುಸ್ತಕವನ್ನು ನೋಡಿದನು. ಮೇಲ ಕ್ಕೆದ್ದನು. ಶ್ರೀರಾಮಚಂದ್ರಮೂರ್ತಿಯ ವಿಗ್ರಹಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, 'ಹೇ! ದಯಾಸಿಂಧೋ! ರಾಘವಾ! ಇದೆಲ್ಲಿಯ ಅವ್ಯಾಜ ಕರುಣಾರಸ! ಈ ದೀನನಿಗಾಗಿ ಎಷ್ಟು ತೊಂದರೆಪಟ್ಟಿರುವೆ? ಈ ಅಕ್ಷರಗಳು ಮಹಾ ಮಹಿಮನಾದ ನಿನ್ನದೇ ಅಲ್ಲವೆ? ಅಯ್ಯೋ! ದೀನವತ್ಸಲಾ! ಇಷ್ಟು ಶ್ರಮವನ್ನು ನೀನು ಸೈರಿಸಿ ದೆಯಾ? ಕಮಲೇ! ನೀನು ಧನ್ಯಳು! ಸಾವಿರಾರು ವರ್ಷಗಳು ತಪಸ್ಸನ್ನು ಮಾಡಿ ದರೂ ತನ್ನ ದಿವ್ಯ ಸಂದರ್ಶನವನ್ನು ಕೊಡದಿರುವ ಆ ಪಟ್ಟಾಭಿರಾಮನು! ಏಕಶಿಲಾ ನಗರವಾಸಿ! ಆನಂದಧಾಮ! ಸದ್ಗುಣವಿರಾಮ! ನಿನಗೆ ಆಯಾಚಿತವಾಗಿ ದರ್ಶನ ಕೊಟ್ಟನಮ್ಮಾ! ಕಮಲೇ! ನೀನು ಸಾಮಾನ್ಯಳಾದ ಕಮಲೆಯಲ್ಲ. ಜಾನಕಿಯೇ ನೀನು. ನನ್ನ ಭವಬಂಧನಗಳನ್ನು ಕತ್ತರಿಸಲು ಈ ಮನೆಯಲ್ಲಿ ಹುಟ್ಟಿರುತ್ತೀಯೆ. ಜಾನಕೀ! ನೀನಲ್ಲದೆ ನನ್ನ ತೊಡಕುಗಳನ್ನು ನಮ್ಮ ರಾಮನಿಗೆ ಹೇಳುವರು ಯಾರು? ಆ ಪರಾತ್ಪರನಿಗೆ ನೀಲಮೇಘಶ್ಯಾಮನಿಗೆ! ನನ್ನ ವಿಜ್ಞಾಪನವನ್ನು ಏನೆಂದು ಹೇಳಿದೆ ಯಮ್ಮಾ! ಇನ್ನೆಷ್ಟುದಿನ ಈ ಬಂದೀಖಾನೆಯಲ್ಲಿ ನಾನಿರಬೇಕೆಂದು ಹೇಳಿದನಮ್ಮಾ ಆ ಮಹಾಪ್ರಭು! ಎಂದು ಮತ್ತೆ ಅಕ್ಷರಗಳನ್ನು ನೋಡುವನು. ಆನಂದದಿಂದ ಮೈ ಮರೆಯುವನು. ಮತ್ತೆ ಎಚ್ಚತ್ತು ಪರಾತ್ಪರಾ! ಭುವನಾಭಿರಾಮಾ! ನಾನು ಬರೆದು ಮಿಕ್ಕುದನ್ನು ನೀನು ಬರೆಯಲು ಬಂದೆಯಾ! ತಂದೇ! ಈ ಉಚ್ಛಿಷ್ಟ ಭೋಜನವು ನಿನಗೇಕೆ? ಪಾಮರನನ್ನು ಪರೀಕ್ಷಿಸಬೇಕೆಂದು ಬಂದೆಯಾ? ಎಂತಹ ವಿಚಿತ್ರ ಸಂವಿಧಾನವನ್ನು ಕಲ್ಪಿಸಿದೆ? ಈ ಪದ್ಯವೇ ನನ್ನ ಮನಸ್ಸಿಗೆ ಬರುವಂತೆ ಮಾಡಿದೆಯೇಕೆ? ಅಪ್ಪಾ! ಏಕಶಿಲಾನಗರಪತೀ! ನೀನು ನಡೆದೇಬಂದೆಯಾ? ಈ ದರಿದ್ರನ ಮನೆಯಲ್ಲಿ ನಿನಗೆ ಪಂಚಪಾತ್ರೆ ನೀರೂ ಇಲ್ಲದಾಯಿತೇ! ಕಮಲೇ! ಲಕ್ಷ್ಮೀ! ಇನ್ನು ಸಾಕು. ಜನ್ಮ ಸಾರ್ಥಕ್ಯಕ್ಕಾಗಿ ಗುರೂಪದೇಶದಂತೆ ಬರೆಯು ತ್ತಿದ್ದ ಗ್ರಂಥಕ್ಕೆ ರಾಮನೇ ಪ್ರವೇಶಿಸಿದ. ನನ್ನ ಬುದ್ಧಿಮಾಲಿನ್ಯವು ಇನ್ನು ಸರಿ ಹೋಗುವುದೆ? ಎಂದು ಕಣ್ಣೀರು ಸುರಿಸುತ್ತಾ ದೇವರ ಪಕ್ಕದಲ್ಲಿಯೇ ಕುಳಿತುಕೊಳ್ಳು ವನು. ವಿಗ್ರಹಗಳ ಪಾದಗಳನ್ನೊತ್ತುವನು. ಅಪ್ಪಾ! ಈ ಮುರುಕುಲು ಗುಡಿಸಿಲಿ ನಲ್ಲಿ ನಡೆದ ನಿನಗೆ ಕಾಲುಗಳು ನೋಯುವುದಿಲ್ಲವೆ? ಅಗೋ ನೋಡು, ನವರತ್ನ ಖಚಿತವಾದ ಭಂಗಾರದ ಉಂಗುರಗಳನ್ನು ಧರಿಸುವ ಕೈಗಳು ಕಬ್ಬಿಣದ ಘಂಟವನ್ನು ಹಿಡಿದು ಕರ್ರಗಾಗಿವೆ, ಎಂದು ಅದನ್ನು ಒರಸುವನು. ಈತನ ಆಟಗಳನ್ನು ನೋಡಿ ಲಕ್ಷ್ಮಿ ಕಮಲೆಯರಿಗೆ ಆಶ್ಚರ್ಯವಾಗಿ ಲಕ್ಷ್ಮಿಯು,

"ಮಲ್ಲನ ಗದ್ದೆಗೆ ಹೋಗಿದ್ದಾನೆ. ಕವಿತ್ವ ಬರೆಯುವವರಿಗೆ ಹುಚ್ಚು ಹಿಡಿಯುವುದೆಂದು ಹೇಳುತ್ತಾರೆ."

"ಅಮ್ಮಾ ಇದು ಶ್ರೀರಾಮಭಕ್ತರ ಲೀಲೆ. ಪ್ರತಿ ನಿಮಿಷದಲ್ಲಿಯೂ ಶ್ರೀರಾಮ ಸೇವೆಯನ್ನು ಮಾಡುವ ಈ ಮಹಾನುಭಾವನಿಗೇ ಹುಚ್ಚು. ಹಾಗೆ ಹೇಳುವವರಿಗೆ ಹುಚ್ಚಾಗಬಹುದಷ್ಟೆ."

"ಇಲ್ಲ. ಶಾರದೆಯ ವಿಷಯದಲ್ಲಿ ಪಶ್ಚಾತ್ತಾಪ. ಆಹಾರವಿಲ್ಲದ ಅನುತಾಪ! ಸಂಸಾರದ ಸಂತಾಪ! ಇವೆಲ್ಲಾ ಸೇರಿ ಆಗುವುದೇನು? ಉನ್ಮಾದ. ಇವರ ಸಂಗಡ ಮಾತನಾಡಿದರೆ ನಮಗೂ ಕಷ್ಟ! ಅವರಿಗೂ ಕಷ್ಟ!

ಹೀಗೆ ಮಾತನಾಡುತ್ತಿರುವಾಗ್ಯೆ ಪೋತನನಿಗೆ ಎಚ್ಚರವಾಯಿತು. ಆತನು,

"ಕಮಲೂ! ಭಾಗವತ ಗ್ರಂಥದಲ್ಲಿ ರಮಣೀಯಗಳಾದ ಈ ಅಕ್ಷರಗಳನ್ನು ಯಾರು ಬರೆದರು?"

"ಅಪ್ಪಾ! ಈಗತಾನೇ ನೀನೇ ಬರೆಯಲಿಲ್ಲವೆ?" ಎಂದು ಅಕ್ಷರಗಳ ಹೋಲಿಕೆಯನ್ನು ತೋರಿಸಿದಳು. ನೋಡುತ್ತಾ ನೋಡುತ್ತಾ ಸಾಯಂಕಾಲವಾಯಿತು. ಪುರಾಣದ ಹಂಬಲಿವೇ ಆಗಲಿಲ್ಲ. ಆ ದಿನ ದೇವಾಲಯದಲ್ಲಿ ತುಂಬಾ ಜನ ಸೇರಿದ್ದರು. ಎಲ್ಲರಿಗೂ ಪೋತನನ ಮನೆಯ ಕಡೆಯೇ ನೋಟ? ಕತ್ತಲಾಗುತ್ತಾ ಬಂದಿತು. ಪೋತನ ಎಂದೂ ಇಷ್ಟು ತಡೆಮಾಡಿದವನಲ್ಲ. ಕರೆದುಕೊಂಡು ಬರೋಣವೆಂದು ದೀವಟಿಗೆಯೊಂದನ್ನು ಸಿದ್ಧಮಾಡಿದರು. ಮನೆಯಲ್ಲಿ ಏನಿದೆಯೋ ಏನಿಲ್ಲವೋ ಬಡತನದ ಸಂಸಾರ ಎಂಬ ಮಾತು ಹೊರಟತಕ್ಷಣವೇ ಸಾವಿರಾರು ರೂಪಾಯಿಗಳ ನಿಧಿ ಶೇಖರವಾಗಿ ಅದನ್ನು ಪುರಾಣಿಕರಿಗೆ ಕೊಡಲು ನಿರ್ಧರಿಸಿದರು. ಇಷ್ಟಾಗುವ ವೇಳೆಗೆ ಪೋತನ ಬಂದನು. ಜನಸಂದಣಿಯನ್ನು ನೋಡಿ ಆನಂದದಿಂದ 'ಲಕ್ಷ್ಮೀರಮಣ ಗೋವಿಂದಾ' ಎಂದು ಕೈಗಳನ್ನು ಜೋಡಿಸಿದನು. ತಕ್ಷಣವೇ ಸಭೆಯು 'ಗೋವಿಂದಾ' ಎಂದಿತು. ಈ ಕೂಗು ಲಕ್ಷ್ಮೀ ಸಮೇತನಾಗಿ ಶೇಷಶಾಯಿಯಾದ ನಾರಾಯಣ ಮೂರ್ತಿಯು ಕೇಳುವಂತಾಯಿತು. ಹಿಂದೆಯೇ 'ಜೈ ಜಾನಕೀಕಾಂತ ಸ್ಮರಣೇ' ಎಂದನು. ಎಲ್ಲರೂ 'ಜೈ ಜೈ ರಾಂ' ಎಂದರು. ಈ ಉತ್ಸಾಹ ಸಾಗರದಲ್ಲಿ ಮೆಲ್ಲಗೆ ತನ್ನ ಸ್ಥಳಕ್ಕೆ ಬಂದು ಆಸನದಲ್ಲಿ ಕುಳಿತು ದೇವರಿಗೆ ಮಂಗಳಾರತಿಯಾಗಲಿ ಅಂದನು ಪೋತನ. ಆಗ ಸಭೆಯಲ್ಲಿದ್ದ ಒಬ್ಬನು ಮೇಲಕ್ಕೆದ್ದು ಕೈಗಳನ್ನು ಜೋಡಿಸಿ,—

"ಪೋತನಾಮಾತ್ಯರ ಉಪದೇಶವು ನಮಗೆ ಆನಂದವನ್ನುಂಟುಮಾಡಿದೆ. ಇದುವರೆಗೆ ಇಷ್ಟು ವರ್ಷಗಳಿಂದ ಇವರು ಇದೇರೀತಿ ಆನಂದದಲ್ಲಿ ತೇಲಾಡಿಸಿದ್ದಾರೆ.

ಇವರಿಗೆ ಯಾವ ಪ್ರತ್ಯುಪಕಾರವೂ ನಮ್ಮಿಂದಾಗದೆ ನಾವು ಕೃತಘ್ನರಾಗಿದ್ದೇವೆ. ನಮ್ಮ ಶಕ್ತ್ಯನುಸಾರ ಸಮರ್ಪಿಸಬೇಕೆಂದಿರುವ ಅಲ್ಪ ಕಾಣಿಕೆಯನ್ನು ಅವರು ಸ್ವೀಕರಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕೆಂದು ಸಭೆಯ ಪರವಾಗಿ ನಾನು ಪುರಾಣಿಕರನ್ನು ಪ್ರಾರ್ಥಿಸುತ್ತೇನೆ" ಎಂದು ಹೇಳಿ ಕುಳಿತನು.

ಈ ಮಾತನ್ನು ಕೇಳುತ್ತಲೇ ಪೋತನನಿಗೆ ವ್ಯಥೆಯು ಹೆಚ್ಚಿತು. ಈ ದಿನ ನನ್ನ ಗತಿಯೇಕೆ ಹೀಗಾಗುತ್ತದೆ? ಶ್ರೀರಾಮನು ಭಾಗವತವನ್ನು ಬರೆಯೋಣ. ಸಭಿಕರಿಗೆ ದ್ರವ್ಯವನ್ನು ಕೊಡಲು ಮನಸ್ಸು ಬರೋಣ! ಶ್ರೀರಾಮನಾಮವನ್ನು ವಿಕ್ರಯ ಮಾಡುವಷ್ಟು ಪಾಪಿಯೇ ನಾನು? ಉಪವಾಸವಾದರೂ ಇರುವೆನಲ್ಲದೆ ಇಂತಹ ಅವಾಚ್ಯವಾದ ಕಾರ್ಯವನ್ನು ಮಾಡಲಾರೆ. ಹೀಗೆಯೇ ಇದ್ದರೆ, ಇವರು ನನ್ನ ಮೌನವನ್ನು ಸಮ್ಮತವೆಂದು ಗ್ರಹಿಸುವರಲ್ಲವೆ? ಧನ ಪಿಶಾಚವು ಸಮೀಪಿಸಿದರೆ ಏನೇನಾಗುವುದೋ! ಎಂದು ಎದ್ದು,—

"ಅಣ್ಣಂದಿರಾ! ತಮ್ಮ ಉದಾರ ಬುದ್ಧಿಗೆ ವಂದನೆಗಳು. ಅನೇಕರು ದ್ರವ್ಯದ ಆಶೆಯಿಂದ ಪುರಾಣ ಪುಣ್ಯ ಕಥೆಗಳನ್ನು ಹೇಳುವುದೇನೋ ನಿಜ! ಧನವು ಇಹ ಪರಗಳಲ್ಲಿಯೂ ತೊಂದರೆಗೆ ಕಾರಣವು. ಸತ್ಯ ಪಥದಲ್ಲಿ ನಡೆಯುವವನಿಗೂ ಹಣಕ್ಕೂ ಬಹಳ ದೂರ. ವ್ಯಾಪಾರ ಮಾಡುವವನು ಸುಳ್ಳು ಹೇಳದೆಯೇ ಹೆಚ್ಚು ಹಣವನ್ನು ಸಂಪಾದಿಸುವನೆ? ಸುಳ್ಳಿನಿಂದಲೇ ಹೆಚ್ಚು ಹಣ! ಈ ಹಣವು ಎಲ್ಲರನ್ನೂ ವಂಚಿಸುತ್ತಿರುವುದು. ಆಶೆಯನ್ನು ಹುಟ್ಟಿಸುವುದು. ಲಕ್ಷಾಧಿಕಾರಿಗಾಗಲಿ ಕೋಟ್ಯಾಧೀಶನಿಗಾಗಲಿ ಇನ್ನೂ ಸಾಲದೆಂದೇ ಅನ್ನಿಸುವುದು. ಎಷ್ಟು ಧನವಿದ್ದರೂ ಕಡೆಯಲ್ಲಿ ಎಲ್ಲವನ್ನೂ ಬಿಟ್ಟೇ ಹೊರಡಬೇಕಲ್ಲವೆ? 'ಆಶಯಾಬದ್ಧ್ಯತೇ ಲೋಕಃ" ಎಂಬಂತೆ ಜೀವಾತ್ಮನು, ಆಶಾಬದ್ಧವಾಗಿ ತನ್ನ ಪರಿಣಾಮವನ್ನೇ ಮರೆತುಬಿಡುವನು. ಈಗ ನಾವು ಮಾಡುತ್ತಿರುವ ಅಮೋಘವಾದ ರಾಮ ಸೇವೆಯಲ್ಲಿ ಈ ಹಣದ ವಿಚಾರವನ್ನು ಯಾರು ಪ್ರಸ್ತಾಪಿಸಿದರು? ಇದನ್ನೆಲ್ಲಾ ಅವರಿಗೆ ಕೊಡಿ ನನಗೆ ಆನಂದ. ಶ್ರೀರಾಮನು ಅವರ ಹೃದಯದಲ್ಲಿ ಸೇರಿಕೊಂಡು ಈ ಭಾವನೆಯನ್ನು ಹುಟ್ಟಿಸಿರಬಹುದು. ಅಪೇಕ್ಷೆಯಿಲ್ಲದವನಿಗೆ ಅನ್ನವನ್ನಿಡಬೇಡಿ. ಹಸಿದವರಿಗೆ ಅನ್ನವನ್ನಿಡಿ. ನನ್ನ ಉಪನ್ಯಾಸವನ್ನು ಕೇಳುವುದು ನಿಮಗೆ ಬೇಸರವಾಗಿರಬಹುದು. ನಾಳೆಯಿಂದ ಅದನ್ನು ನಿಲ್ಲಿಸಿಬಿಡುತ್ತೇನೆ. ಯಾವ ಕಾರ್ಯಕ್ಕೂ ಕಡೆಯಲ್ಲಿ ತಾನೇ ಬೆಲೆಯನ್ನು ಕಟ್ಟುವುದು! ಹಾಗೆಯೇ ನೀವೂ ಮಾಡಿರಬಹುದಲ್ಲವೆ? ಆದುದು ಆಗಿಹೋಯಿತು. ಇಪ್ಪತ್ತು ವರ್ಷಗಳಿಂದ ನನ್ನ ಆಲಾಪಗಳನ್ನು ಕೇಳಿ ನನಗೆ ಶ್ರೀರಾಮ ಭಕ್ತಿಯು ಬೇರೂರುವಂತೆ ಮಾಡಿದ ತಮ್ಮ ಉಪಕಾರಕ್ಕೆ ನಾನು ಕೃತಜ್ಞತೆಯನ್ನು ತೋರಿಸುತ್ತೇನೆ. ಇದಕ್ಕೆ ಯಾವ ಪ್ರತ್ಯುಪಕಾರವನ್ನೂ ಮಾಡುವುದಕ್ಕಿಲ್ಲವಾಯಿತಲ್ಲಾ ಎಂದು ಪರಿತಾಪಪಡುತ್ತೇನೆ. ಆನಂದಸಾಗರವು ತಪ್ಪಿತೆಂದು ವ್ಯಥೆಪಡುತ್ತೇನೆ. ತಮಗೆ

ತೊಂದರೆಯನ್ನು ಕೊಟ್ಟುದಕ್ಕಾಗಿ ಯಾವ ಶಿಕ್ಷೆಯನ್ನು ಅನುಭವಿಸಬೇಕೋ ಅದನ್ನು ಕೋದಂಡರಾಮನನ್ನೇ ಕೇಳುತ್ತೇನೆ. ನೀವು ಶೇಖರಿಸಿರುವ ಧನವನ್ನು ಅಪೇಕ್ಷಿತರಿಗೆ ಕೊಡಿ. ಆಗ ನನಗೆ ಆನಂದ. ನೆರೆದಿರುವ ಅಣ್ಣಂದಿರಿಗೂ ಅಕ್ಕಂದಿರಿಗೂ ನನ್ನ ವಂದನೆಗಳು ಎಂದು ಕಣ್ಣೀರು ಸುರಿಸುತ್ತಾ ಕುಳಿತೇಬಿಟ್ಟನು.

ಸಭೆಯಲ್ಲಿ ಕಳವಳವು ಹೆಚ್ಚಾಯಿತು. ಎಲ್ಲರೂ ಬುದ್ಧಿಯಿಲ್ಲದ ಕೆಲಸವನ್ನು ಮಾಡಿದೆವು. ಮಹನೀಯರ ಹೃದಯವನ್ನು ತಿಳಿಯುವವರು ಇದ್ದಾರೆಯೆ ? ಎಂದರು. ಪೋತನಾಮಾತ್ಯನಿಗೆ ಸಮಾಧಾನ ಹೇಳುವರೇ ಇಲ್ಲ. ಪುರಾಣವನ್ನು ಕೇಳುವ ಅವಕಾಶವು ತಪ್ಪಿತಲ್ಲಾ ಎಂಬ ವ್ಯಥೆ. ಹೀಗಾಗಿ ಕಳವಳಗೊಂಡಿರುವ ಸಭೆಯಲ್ಲಿ ಒಬ್ಬ ಜ್ಞಾನ ವಯೋ ವೃದ್ಧನು ಕೈಯಲ್ಲಿನ ಊರುಕೋಲನ್ನು ಹಿಡಿದುಕೊಂಡು ಮೆಲ್ಲನೆ ಮೇಲಕ್ಕೆದ್ದನು. ಆತನು ಎಲ್ಲರಿಗಿಂತಲೂ ಹಿಂದೆಯೇ ಇದ್ದನು. ಬಟ್ಟೆಗಳ ಆಡಂಬರವೇ ಇಲ್ಲ. ಕಂಬಳಿಯೊಂದನ್ನು ಹೊದ್ದುಕೊಂಡಿದ್ದನು. ರೂಪವೂ ವಿಕಾರ. ಅರವತ್ತೆಪ್ಪತ್ತು ವರ್ಷಗಳವನಂತೆ ಕಾಣುತ್ತಿದ್ದನು. ಆತನು ಛಳಿಯಿಂದ ನಡುಗುತ್ತಾ !

“ ಅಪ್ಪಾ ! ಪುಣ್ಯಾತ್ಮರಾ ! ಈ ಮುದಿಯನ ಮಾತುಗಳು ನಿಮಗೆ ಅರುಚ್ಯವಾಗಬಹುದು. ಪೋತನಾಮಾತ್ಯನ ಪುರಾಣವನ್ನು ಒಂದು ದಿನವಾದರೂ ಬಿಡದೆ ಕೇಳಿದವನೆಂದರೆ ನಾನೇ ! ಈ ದಿನದ ಕಾರ್ಯದಲ್ಲಿ ಪುರಾಣವೇ ನಿಂತುಹೋಗುವಂತೆ ತಿಳಿಯಿತು. ಯಾರೇ ಆಗಲಿ ಮಾಡುವ ಕಾರ್ಯವನ್ನು ದೂರಾಲೋಚನೆಯಿಂದ ಮಾಡಬೇಕು. ಮರೆವು ಆಗಾಗ ನಮ್ಮ ಹಿಂದೆಯೇ ಇರುವುದು. ಇದೇ ವಂಚನೆ. ಅಥವಾ ಮಾಯೆ. ಅದು ಸತ್ಕಾರ್ಯಗಳ ವಿಷಯದಲ್ಲಿ ಬಹಳ ಜಾಗ್ರತೆ ಬಂದುಬಿಡುತ್ತದೆ. ಆ ಮರೆವು ಜೀವಾತ್ಮನ ಆವರಣ. ಧನವನ್ನು ಕೊಡಬೇಕೆಂಬ ಉದ್ದೇಶ್ಯವು ಕೆಟ್ಟ ಭಾವನೆಯಿಂದಲ್ಲ. ಅದನ್ನು ತೆಗೆದುಕೊಳ್ಳಲು ಪುರಾಣೀಕರಿಗೆ ಇಷ್ಟವಿಲ್ಲ. ಒಳ್ಳೆಯದೇ ಆಯಿತು. ಅಷ್ಟಕ್ಕೇ ಅವರು ಸುಮ್ಮನಾದರೆ ನಾಳೆಯಿಂದ ಪುರಾಣವನ್ನೇ ನಿಲ್ಲಿಸಿಬಿಡುವರಂತೆ ; ಇದು ಯಾವ ನ್ಯಾಯ ? ಶ್ರೀರಾಮನವಮಿಗೂ ಸಿಲೇಮಾ ಸಾಬರಿಗೂ ಸಂಬಂಧವೇನು ? ಯಾರೋ ಧನವನ್ನು ಕೊಡಲು ಮನಸ್ಸು ಮಾಡಿದರು. ಅದು ಇವರಿಗೆ ಇಷ್ಟವಿಲ್ಲದ ಮಾತ್ರಕ್ಕೆ ಎಲ್ಲರಿಗೂ ಸರಿಯಾದ ಮಾರ್ಗದಲ್ಲಿ ಹೋಗಬೇಡವೆ ? ಈಗಲೂ ನಾನು ಸರ್ವ ಸಮ್ಮತವಾದ ದಾರಿಯನ್ನು ಹೇಳುತ್ತೇನೆ. ಇಷ್ಟವಿದ್ದವರು ಕೇಳಿ. ಕೇಳಲೇಬೇಕೆಂಬ ಹಟವೇನೂ ನನ್ನದಲ್ಲ. ಈ ಧನವು ಸತ್ಪಾತ್ರ ಸೇವೆಗಾಗಿ ಆರ್ಜಿಸಲ್ಪಟ್ಟಿದೆ. ಅದನ್ನು ತೆಗೆದುಕೊಳ್ಳಲು ಯಾರೂ ಧೈರ್ಯ ಮಾಡುವುದಿಲ್ಲ. ಅವರವರ ಹಣವನ್ನು ಅವರಿಗೇ ಕೊಡಿರೆಂದು ಹೇಳುವಿರಾ ? ಯಾರು ಯಾರು ಎಷ್ಟೆಷ್ಟು ಕೊಟ್ಟಿದ್ದಾರೆ ? ಕೇಳಿದರೆ ಸರಿಯಾದ ಉತ್ತರವು ಬರುವುದೆ ? ಎಲ್ಲರಿಂದಲೂ ಸುಳ್ಳನ್ನು ಹೇಳಿಸಲು ಯಾರು ಬದ್ಧರು ? ಅದೂ

ಧರ್ಮಲೋಪವೇ ಅಲ್ಲವೆ ? ಇವರ ಪುರಾಣ ಶ್ರವಣವು ನಮಗಿಷ್ಟು ತೊಂದರೆಯನ್ನು ಕೊಟ್ಟಿತು. ಸೂಕ್ಷ್ಮ ಧರ್ಮಗಳನ್ನೆಲ್ಲಾ ಇವರೇಕೆ ನಮಗೆ ಹೇಳಬೇಕಾಗಿದ್ದಿತು ? ದ್ರವ್ಯವು ಈಗ ಯಾರದೂ ಅಲ್ಲ. ಅದು ಕೋದಂಡರಾಮನದು. ಈ ಧನವನ್ನು ಶ್ರೀರಾಮಾರ್ಪಣ ಮಾಡಬೇಕೆಂದಿದ್ದರೆ, ಅನಾಥರಿಗೂ ಅಂಗಹೀನರಿಗೂ ಸಮಾರಾಧನೆಗಳನ್ನು ಮಾಡಿಸಬೇಕು. ಬಟ್ಟೆಬರೆಗಳನ್ನು ಕೊಡಬೇಕು. ಅದಕ್ಕೆ ಪೋತನಾಮಾತ್ಯರೇ ಪ್ರಧಾನ ಪಾತ್ರವಾಗಿರಬೇಕು. ಅವರಿಂದಲೇ ಅಲ್ಲವೇ ಇಷ್ಟು ದ್ರವ್ಯವು ಶೇಖರವಾದುದು. ಇದಕ್ಕೂ ಅವರು ಸಮ್ಮತಿಸದಿದ್ದರೆ ದೈವ ದ್ರೋಹಿಗಳಲ್ಲವೆ ? ಇದಾಗುವವರೆಗೂ ಅವರು ಪುರಾಣವನ್ನು ನಿಲ್ಲಿಸಲಿ ! ಹೀಗೆ ಮಾಡುವುದು ಯುಕ್ತವಲ್ಲದೆ, ಸುಮ್ಮನೆ ಪುರಾಣವನ್ನು ನಿಲ್ಲಿಸುವುದು ಕೇವಲ ಮೂರ್ಖತನ. ಅನೇಕರು ಇದರಿಂದ ವ್ಯಥೆಪಡುವರು. ಅದು ನಮ್ಮ ಕೋದಂಡರಾಮನಿಗೆ ತಿಳಿಯದಿರುವುದೆ ? ಆತನಲ್ಲಿಗೆ ದೂರು ಹೋದಾಗ ಅಪರಾಧಿಗಳು ಯಾರು ? ಪೋತನನವರೆಂದೇ ನಿರ್ದಾಕ್ಷಿಣ್ಯವಾಗಿ ಹೇಳಿ. ಇಷ್ಟರಮೇಲೆ ತಮ್ಮೆಲ್ಲರ ಇಷ್ಟ ಬಂದಂತೆ ಮಾಡಿ."

ಎಂದು ಹೇಳಿ ತನ್ನ ಸ್ಥಳದಲ್ಲಿ ಕುಳಿತನು. ಈ ವಾಣಿಯಿಂದ ಆನಂದಗೊಂಡ ಪೋತನಾಮಾತ್ಯನು ತನ್ನ ಸ್ಥಳದಿಂದ ಪಕ್ಷಿಯಂತೆ ಹಾರಿಬಂದು ಆ ಮುದುಕನ ಪಾದಗಳನ್ನು ಹಿಡಿದು ಗೊಳೋ ಎಂದು ಅತ್ತನು. ಈತನ ಭಾವವನ್ನು ನೋಡಿ ಮುದುಕನು,

"ಪೋತನಾ ! ನಾನು ಇದುವರೆವಿಗೆ ಆಡಿದ ಮಾತುಗಳು, ನಿನ್ನ ಪುರಾಣ ಶ್ರವಣದ ಫಲವೇ ! ಅದಕ್ಕೇಕೆ ಇಷ್ಟು ಉದ್ಗಾರ ಮಾಡುವೆ ?"

"ಮಹಾತ್ಮಾ ! ಇಲ್ಲಿರುವವರೆಲ್ಲಾ ಹಾಗೆಯೇ ನಂಬಬಹುದು. ನಾನು ಹಾಗೆ ಭಾವಿಸಲಾರೆ. ಧರ್ಮಗಳಲ್ಲಿನ ಸೂಕ್ಷ್ಮಗಳನ್ನು ಇಷ್ಟರವರೆಗೆ ವಿವರಿಸಬಲ್ಲವರು ಈ ಊರಿನಲ್ಲಿರುವರೆ ? ನೀನು ನಮ್ಮ ರಾಮನ ಮುಖ್ಯ ಪ್ರಾಣವಾದ ಆಂಜನೇಯನಲ್ಲದೆ ಅನ್ಯಥಾ ಇಲ್ಲ. ನಾನು ಪೋತನ ರಾಜು. ನೀನು ನವ ವ್ಯಾಕರಣ ಪಂಡಿತ! ನನ್ನನ್ನು ಉದ್ಧಾರ ಮಾಡು." ಎಂದು ಆತನ ಪಾದಗಳನ್ನು ಹಿಡಿದು ಅಳಲಾರಂಭಿಸಿದನು. ಆಗ ಉಂಟಾದ ಆಶ್ಚರ್ಯವು ವರ್ಣನಾತೀತವಾಯಿತು. ಮೋಡವಿಲ್ಲದ ಮಿಂಚು ಮಿಂಚಿತು. ಗುಡುಗಿನಂತೆ ಒಂದು ಶಬ್ದವಾಯಿತು. ಎಲ್ಲರೂ ಕಣ್ಣುಗಳನ್ನು ಮುಚ್ಚಲು ಆಂಜನೇಯನು ತನ್ನ ನಿಜ ಸ್ವರೂಪವನ್ನು ಪೋತನಾಮಾತ್ಯನಿಗೆ ಮಾತ್ರ ತೋರಿಸಿ ಅಭಯ ಹಸ್ತವನ್ನು ತಲೆಯಮೇಲಿಟ್ಟು 'ಪೋತನಾ ನೀನು ಸಾಮಾನ್ಯನಲ್ಲ. ನಿನ್ನ ಇಷ್ಟಾರ್ಥಗಳೆಲ್ಲವೂ ಶ್ರೀರಾಮಾನುಗ್ರಹದಿಂದ ಫಲಿಸುವುವು.' ಎಂದು ಹೇಳಿ ಅಂತರ್ಧಾನನಾದನು. ಎಲ್ಲರಿಗೂ ಎಚ್ಚರವಾಯಿತು. ಕಣ್ಣುಬಿಟ್ಟರು. ಅಲ್ಲೇನಿದೆ ? ಎಲ್ಲವೂ ಬಯಲೇ ಆಗಿ, ಪುರಾಣಕ್ಕೆ ಪ್ರಾರಂಭವಾಗಿದ್ದಿತು.

## ಪೋತನಾಮಾತ್ಯನ ವೈಭವದ ದಾನ

ಶ್ರೀರಾಮಾನುಗ್ರಹದಿಂದ ನಡೆಯಬೇಕಾದ ದಾನ ಧರ್ಮಗಳು ಮರುದಿನ ದಿಂದಲೇ ಪ್ರಾರಂಭವೆಂಬ ಸುದ್ದಿಯು ನಿಮಿಷ ಮಾತ್ರದಲ್ಲಿಯೇ ದೇಶವೆಲ್ಲಾ ಹರಡಿ, ಸೂರ್ಯೋದಯದೊಳಗಾಗಿ ಸಾವಿರಾರು ಜನ ಭಜನೆಯಿಂದ ತುಂಬಿದರು. ಪ್ರತಿಯೊಬ್ಬರೂ ತಮ್ಮ ಕೈಲಾದನುಟ್ಟಿಗೆ ಸಹಾಯ ಮಾಡುವರೇ! ಧಾನ್ಯದ ರಾಶಿಗಳು ಅಪರಿಮಿತವಾಗುತ್ತಾ ಬಂದುವು. ಎಂಟುದಿನ ಸಮಾರಾಧನೆಯಾದರೂ ಮುಗಿಯದಷ್ಟು ರಾಶಿಗಳು. ಕಾಯಿ ಪಲ್ಯಗಳು, ಹಾಲು, ಮೊಸರು, ತುಪ್ಪ ಇವುಗಳನ್ನು ಶೇಖರಿಸಿಡಲು ಪಾತ್ರೆಗಳೇ ಇಲ್ಲ. ಇನ್ನು ಬಟ್ಟೆಬರೆಗಳ ರಾಶಿಯಂತೂ ಅಪಾರ! ಇದರ ಮಧ್ಯೆ ಪೋತನನು ಹೆಂಡತಿ ಮಗಳೊಡನೆ ಕೋದಂಡರಾಮನ ಲೀಲೆಗೆ ವಿಸ್ಮಯಗೊಂಡು ಎಲ್ಲರೊಡನೆಯೂ ಸರಸವಾಗಿ ಮಾತನಾಡುತ್ತಿದ್ದಾನೆ. ಅಷ್ಟರಲ್ಲಿಯೇ ಊರುಮುಂದೆ ಸಾವಿರಾರು ಭಂಡಿಗಳು ಬರುವ ಶಬ್ದವು ಕೇಳಿಸಿತು. ಏನೋ ಎಂದು ನೋಡಲು ಹೊರಟ ಪೋತನ. ಅಲ್ಲಿ ಒಂದು ಮೇನಾ ಬರುತ್ತಿದ್ದಿತು. ಒಳಗಿದ್ದವನು ತನ್ನ ಅಟ್ಟಹಾಸವನ್ನು ತೋರಿಸುವ ರೀತಿಯಿಂದ ಮೇನಾದ ಒಂದು ಕಡೆ ಭೋಯಿಗಳಿಗೆ ಕೊಂಬನ್ನು ಬಿಡುವಂತೆ ಹೇಳಿದನು. ಮೇನಾ ಮಾತ್ರ ಹೋಗುತ್ತಲೇ ಇದ್ದಿತು. ಅಲ್ಲೊಂದು ಹೊಲದಲ್ಲಿ ಉಳುತ್ತಿದ್ದ ರೈತನು ಈ ಆಶ್ಚರ್ಯವನ್ನು ನೋಡುತ್ತಾ ನಿಂತನು. ಇವನನ್ನು ನೋಡಿ ಪೋತನನು 'ಏನು ಹಾಗೆ ನೋಡುತ್ತೀಯೆ. ನೀನೂ ನೇಗಲಿನ ಒಂದು ಕಡೆ ಎತ್ತನ್ನು ಬಿಡು' ಅಂದ. ರೈತನು ಹಾಗೆಯೇ ಮಾಡಲು ನೇಗಿಲು ಸರಾಗವಾಗಿ ಹೋಗುತ್ತಿತ್ತು. ಇದನ್ನು ನೋಡಿ, ಶ್ರೀನಾಥನು ಮೇನಾ ಮತ್ತೊಂದು ಕೊಂಬಿನ ಭೋಯಿಗಳನ್ನೂ ದೂರಹೋಗುವಂತೆ ಹೇಳಿದನು. ಅವರು ಹಾಗೆಯೇ ಮಾಡಿದರು. ಮೇನಾ ಹೋಗುತ್ತಲೇ ಇತ್ತು. ರೈತನಿಗೆ ನೇಗಲಿನ ಮತ್ತೊಂದು ಎತ್ತನ್ನೂ ಬಿಡುವಂತೆ ಹೇಳಿದ ಪೋತನನ ನೇಗಿಲೂ ನಡೆಯುತ್ತಿತ್ತು. ಈ ಅದ್ಭುತವನ್ನು ನೋಡಿ ನಾಚಿದವನಾದ ಶ್ರೀನಾಥನು, ಮೇನಾದಿಂದಿಳಿದು ಬಂದು,



"ಉತ್ತು ತಿನ್ನುವ ಕವಿಗಳು ಕ್ಷೇಮವೋ?"

"ಹೌದಯ್ಯಾ! ಹೌದು. ರಹಸ್ಯವರಿಯದ ತಮಗಿಂತಲೂ ಕಷ್ಟದಲ್ಲಿಲ್ಲ."

ಉ॥ ಬಾಲ ರಸಾಲ ಸಾಲ ನವಪಲ್ಲವ ಕೋಮಲ ಕಾವ್ಯ ಕನ್ಯಕ೯ ।
ಗೂಳುಲಕಿಚ್ಚಿಯಪ್ಪಡುಪು ಕೂಡು ಭುಜಿಂಚುಟಕಂಟೆ ಸತ್ಕವುಲ್ ।
ಹಾಲಿಕುಲೈನ ನೇಮಿ ಗಹನಾಂತರ ಸೀಮಲ ಕಂದಮೂಲಗಾ ।
ದ್ದಾಲಿಕುಲೈನನೇಮಿ ನಿಜದಾರಸುತೋದರ ಪೋಷಣಾರ್ಥಮೈ ॥

ಈ ಮಾತನ್ನು ಕೇಳುತ್ತಲೇ ಶ್ರೀನಾಥನು ನಿರ್ವಿಣ್ಣನಾದನು. ಕವಿ ಸಹಸ್ರ ದೊಡನೆ ಮಾತನಾಡುತ್ತಾ ದೇವಾಲಯದ ಬಳಿಗೆ ಬಂದು ನೋಡಿದನು. ಅಲ್ಲಿ ಸಿದ್ಧವಾಗಿದ್ದ ಭಕ್ಷ್ಯಗಳೂ ನೆರೆದಿದ್ದ ಭಾಗವತರ ಗುಂಪೂ ಈತನಿಗೂ ಆನಂದ ವನ್ನುಂಟುಮಾಡಿತು. ಶಾರದೆಯು ಓಡುತ್ತಾ ಅತ್ತೆಯ ಬಳಿಗೆ ಹೋದಳು. ಈಕೆ ಯನ್ನು ನೋಡುತ್ತಲೇ ಲಕ್ಷ್ಮಿ, ಕಮಲೆಯರಿಗೆ ಆನಂದವು ಮಿತಿಮೀರಿತು. ಬಟ್ಟಿಗಳ ರಾಶಿ ಕಾಯಿ ಪಲ್ಯಗಳ ಹೇರಳ! ಜನರ ಆನಂದದ ಸಂದಣಿ. ಇವು ಶ್ರೀನಾಥ ನಿಗೂ ಕವಿಗಳಿಗೂ ಆಶ್ಚರ್ಯವನ್ನುಂಟುಮಾಡಿದುವು. ಮತ್ತು ರಾಜ ವೈಭವಕ್ಕಿಂತ ಭಕ್ತರ ಪ್ರಭಾವವೇ ಹೆಚ್ಚೆಂದು ನಿರ್ಣಯವಾಯಿತು. ಇಂತಹ ಸಂತೋಷ ಕೂಟ ವನ್ನು ಆತನು ಹಿಂದೆಂದೂ ನೋಡಿರಲಿಲ್ಲ. ಪೋತನಾಮಾತ್ಯನ ಮನಸ್ಸನ್ನು ರಾಜರ ಕಡೆ ತಿರುಗಿಸಲು ಸಾಧ್ಯವೆ? ಎಂದು ಎಲ್ಲರೂ ಯೋಚಿಸುತ್ತಿದ್ದರು. ಲಕ್ಷ್ಮಿ, ಶಾರದೆ, ಲಲಿತೆಯರು ಸುಮಂಗಲಿಯರಿಗೆ ತಾಂಬೂಲಗಳನ್ನು ಕೊಟ್ಟರು. ಅಂದಿನ ಸಮಾರಾಧನೆ ಮುಗಿದು ಮರುದಿನಕ್ಕಾಗಿ ತರಕಾರಿಗಳನ್ನು ಹೆಚ್ಚಲು ಶ್ರೀನಾಥನೂ, ಇತರ ಕವಿಗಳೂ ಸಿದ್ಧರಾದರು. ಅಲ್ಲೆಲ್ಲಾ ಪೋತನನ ಅದೃಷ್ಟ ವಿಚಾರವಾದ ಸಲ್ಲಾಪಗಳೇ! ತಮ್ಮ ಉದ್ದಿಶ್ಯ ಕಾರ್ಯವೇ ಮರೆಯಿತು. ಶ್ರೀನಾಥನಿಗೆ ಅನು ಮಾನಸ್ಸಿನಲ್ಲಿ ಕೊರೆಯುತ್ತಿದ್ದಿತು. ಆತನು ಭಾವವನ್ನು ನೋಡಿ,

"ಭಾವಾ! ನಿನ್ನ ಭಾಗವತ ರಚನೆಯು ಮುಗಿಯಿತೆ?"

"ಅದು ನನ್ನ ಕೈಲಿಲ್ಲ. ಕೋದಂಡರಾಮನ ಕೈಲಿದೆ."

"ಇದೊಳ್ಳೇ ಹುಚ್ಚು. ಕೇಳಿದ್ದಕ್ಕೊಂದು ಹೇಳುವೆ. ಸರಿಯಾದ ಮಾತೇ ಇಲ್ಲ."

"ನಿಮಗೆ ನನ್ನಲ್ಲಿರುವ ಅಸೂಯಾ ಗುಣವು ಹಾಗೆ ಕಾಣುತ್ತದೆ."

"ನಿನ್ನಲ್ಲಿ ಅಸೂಯೆಯಿದ್ದರೆ ಶಾರದೆಯನ್ನೇಕೆ ಕರೆತರಬೇಕಾಗಿದ್ದಿತು."

"ನಿಮ್ಮ ಕ್ಷಮಾಗುಣವು ಅಭಿನಂದನೀಯವಾದುದು."

"ಭಾಗವತವನ್ನು ಅಂಕಿತ ಹಾಕುವ ವಿಚಾರವೇನು?"

"ಆ ವಿಚಾರವು ಮೊದಲೇ ಇತ್ಯರ್ಥವಾಗಿದೆ; ಶ್ರೀರಾಮನಿಗೇ ಅಂಕಿತ."

"ಅದು ಪ್ರಮಾದಕ್ಕೆ ಬರುವಂತಿದೆ. ದೊರೆಯು ಹಟವನ್ನೇ ಹಿಡಿದಿದ್ದಾನೆ. ನಿನಗೆ ತೊಂದರೆಯು ತಾನಾಗಿಯೇ ಬರುವಂತಿದೆ. ಅದಕ್ಕಾಗಿಯೇ ನಾನು ಬಂದಿರುವುದು."

" ತಾನಾಗಿ ಬಂದ ತೊಂದರೆಯನ್ನು ಸಂತೋಷದಿಂದ ಅನುಭವಿಸಬೇಕು."

ಈ ಮಾತನ್ನು ಕೇಳಿ ಅಲ್ಲಿದ್ದ ರುದ್ರಾಕ್ಷಿಗಳ ಹಾರದ ದೊಡ್ಡ ಪಂಡಿತರು, ಕೈಗಳನ್ನು ತಿರುಗಿಸುತ್ತಾ,

"ಪೋತನಾಮಾತ್ಯರೇ ! ತಮ್ಮ ಮಾತಿಗೆ ಲೋಕವೇ ಬೆರಗಾಗುವಂತಿದೆ. ಗ್ರಂಥವನ್ನು ಧೊರೆಗೆ ಅಂಕಿತ ಹಾಕುವುದಕ್ಕೆ ತಮಗಿಷ್ಟು ತಾಪತ್ರಯವೆ ? ಕಾಳಿದಾ ಸಾದಿ ಕವಿಗಳಿಗಿಂತಲೂ ತಮ್ಮ ಕವಿತ್ವವೇ? ನನ್ನಯ್ಯ ಭಟ್ಟ, ಅಲಸಾನಿ ಪೆದ್ದನ, ನಂದಿ ತಿಮ್ಮನ, ಮೊದಲಾದವರು ಸಾಮಾನ್ಯರೊ ? ಈ ಒಂದು ಭಾಗವತವನ್ನು ಧೊರೆಗಳು ಸ್ವಾಧೀನಪಡಿಸಿಕೊಳ್ಳಲಾರರೆಂದು ಭಾವಿಸಿದಿರಾ ? ಅತಿ ಮೂರ್ಖತನವು ಯಾರಿಗೂ ಒಳ್ಳೆಯದಲ್ಲ. ಗ್ರಂಥವನ್ನು ಧೊರೆಗಳಿಗೆ ಅಂಕಿತ ಹಾಕಿ. ನಿಮಗೆ ಲಾಭ ನಮಗೆ ಆನಂದ !

ಇದೊಂದೂ ಪೋತನಾಮಾತ್ಯನ ಕಿವಿಗೇ ಬೀಳಲಿಲ್ಲ. ಕೂಡಲೇ ಪುರಾಣಕ್ಕೆ ಪ್ರಾರಂಭವಾಯಿತು. ಅಂದು ಗಜೇಂದ್ರ ಮೋಕ್ಷದ ಕಥಾಭಾಗ. "ಸಿರಿಕಿ ಜೆಪ್ಪಡು" ಎಂಬ ಪದ್ಯವನ್ನು ಹೇಳಿದನು. ಶ್ರೀನಾಥನು ಸಮಯವು ಸಿಕ್ಕಿತೆಂದು,

"ಭಾವಾ, ಸಾಕು ನಿಲ್ಲಿಸು. ನಿನ್ನ ಪ್ರಸಂಗ ! ಈ ಹಳ್ಳಿಯವರಿಗೆಲ್ಲಾ ಒಂದು ಮಂಕುಬೂದಿಯನ್ನು ಹಾಕಿದ್ದೀಯೆ ! ನಿನ್ನ ಹೆಸರಿಗೆ ತಕ್ಕಂತಿದೆ. ಏನು ಪದ್ಯ ವಯ್ಯಾ ಅದು. ಹೆಂಡತಿಯ ಸೀರೇ ಸೆರಗೇ ಮರೆತ ಒಬ್ಬ ದಡ್ಡನು ಲೋಕವನ್ನು ಕಾಪಾಡುವನೋ ! ಅದಕ್ಕೇ ಕವಿಗೆ ಲೋಕಾನುಭವ ಬೇಕೆಂದು ದೊಡ್ಡವರು ಹೇಳುವುದು."

ಈ ಮಾತನ್ನು ಹೇಳುತ್ತಾ ಪುಸ್ತಕವನ್ನು ಕೈಗೆ ತೆಗೆದುಕೊಂಡರು. ಅದನ್ನು ಹರಿಯಬೇಕೆನ್ನುವಷ್ಟು ಕೋಪ ! ತಕ್ಷಣವೇ ಕಮಲೆಯು ಓಡಿಬಂದು ಅಪ್ಪಾ, ನಾನೂ ಶಾರದೆ ಭಾವಿ ಹತ್ತಿ ಆಡುತ್ತಾ........ಅನ್ನುವ ವೇಳೆಗೆ ಶ್ರೀನಾಥನು ಪುಸ್ತಕ ವನ್ನು ಹಿಡಿದುಕೊಂಡೇ ಓಡಿದನು. ಕವಿಗಳೆಲ್ಲಾ ಈತನ ಹಿಂದೆಯೇ ಓಡಿದರು. ಅಲ್ಲೇನಿದೆ ಶಾರದೆ ಆಡುತ್ತಿದ್ದಾಳೆ. ಶ್ರೀನಾಥನಿಗೆ ನಾಚಿಕೆಯಾಯಿತು. ಭಾವನನ್ನು ಹೀಯಾಳಿಸಿದ ಫಲವು ಇಷ್ಟಾಯಿತೆಂದು ಆತನ ಕ್ಷಮೆಯನ್ನು ಬೇಡಿದನು.

ಮಾರನೆಯ ದಿನ ಬಟ್ಟೆಗಳ ದಾನಕ್ಕೆ ಪ್ರಾರಂಭ ! ಮಲ್ಲನ, ಲಕ್ಷ್ಮಿ, ಶಾರದೆ, ಕಮಲೆ ಎಲ್ಲರೂ ಕೊಡುವರೇ! 'ದೇಹಿ' ಅಂದವರಿಗೆ 'ನಾಸ್ತಿ' ಎಂಬ ಪದವೇ ಇಲ್ಲ. ಮಧ್ಯಾಹ್ನದೊಳಗಾಗಿ ಬಟ್ಟೆಗಳ ರಾಶಿಯೂ ಮುಗಿಯಿತು. ಆಗ ಒಬ್ಬ ವೃದ್ಧನು ಛಳಿಯಿಂದ ನಡುಗುತ್ತಾ 'ಅಪ್ಪಾ ! ನನಗೊಂದು ಬಟ್ಟೆ' ಅಂದ. ಶಾರದೆಯ ಮುಖ ನೋಡಿದ ಪೋತನ. ಆಕೆಯು ಇಂಗಿತವನ್ನು ತಿಳಿದು 'ಚಿಂತೆಯಿಲ್ಲ.

ನಮ್ಮಪ್ಪ ಕೊಡಿಸಿದ ಪೀತಾಂಬರವಿದೆ, ರಾಮಾರ್ಪಣವಾಗಲಿ' ಎಂದು ಅಮೋಘ ವಾದ ಪೀತಾಂಬರವನ್ನು ಮಾವನ ಕೈಗೆ ಕೊಟ್ಟಳು. ಆತನು ತಿರುಕನಿಗೆ ಕೊಟ್ಟೇ ಬಿಟ್ಟನು. ಇನ್ನು ಶ್ರೀನಾಥನು ಸುಮ್ಮನಿರುವುದು ಹೇಗೆ ?....

ಇದೆಲ್ಲಾ ಅವಿವೇಕವೆಂದೇ ಅಂದುಕೊಂಡನು. ಶಾರದೆಯನ್ನು ದಂಡಿಸಲು ಮನಸ್ಸಿಲ್ಲ. ಅದು ಆಕೆಯ ತಪ್ಪೂ ಅಲ್ಲ. ಅಂಕಿತದ ವಿಚಾರದಲ್ಲಿ ಇನ್ನೊಂದುಸಲ ಬುದ್ಧಿ ಹೇಳಿ ಕೇಳದಿದ್ದರೆ ಶಾರದೆಯನ್ನು ಕರೆದುಕೊಂಡೇ ಹೋಗುವುದೆಂದು ನಿರ್ಣಯ ಮಾಡಿದನು. ಈತನು ಮಾಡುವ ದಾನಗಳು ಲೋಕ ಮೆಚ್ಚುಗೆಗೆಂದೂ ಇಂತಹ ಅವಿವೇಕಿಗಳು ಲೋಕದಲ್ಲಿ ಎಷ್ಟೋ ಜನರಿರುವರೆಂದೂ, ಕೇಡುಗಾಲಕ್ಕೆ ಒಳ್ಳೆಯದು ಕೆಟ್ಟುದಾಗಿಯೂ, ಕೆಟ್ಟುದು ಒಳ್ಳೆಯದಾಗಿಯೂ ಕಾಣುವುದೇ ಲೋಕದ ಸ್ವಭಾವವೆಂದೂ ಅಂದುಕೊಂಡನು. ತಾನು ಕೆಟ್ಟ ಕೋತಿ ವನವನ್ನೆಲ್ಲಾ ಕೆಡಿಸಿ ತೆಂಬಂತೆ ಈ ಪೋತನನು ಮಾಡುತ್ತಿದ್ದಾನೆ. ನಮ್ಮ ಶಾರದೆಯೂ ಇವನ ಬೀಳು ವಿಕೆಗೇ ಒಳಗಾಗಿದ್ದಾಳೆ. ಅವಳನ್ನು ದಾರಿಗೆ ಹೇಗೆ ತರಬೇಕೋ ತಿಳಿಯದು.

ಹೀಗೆಂದು ಯೋಚನೆಯನ್ನು ಮಾಡಿ, ಅಕ್ಕನ ಬಳಿಗೆ ಬಂದು ಮ್ಲಾನವದನ ನಾಗಿ,

"ಅಕ್ಕಾ ! ಭಾವನಿಗೆ ಸ್ವಲ್ಪವಾದರೂ ಬುದ್ಧಿಯಿಲ್ಲ. ಬರುವ ಐಶ್ವರ್ಯವನ್ನು ದೂರಮಾಡಿ ಕಷ್ಟಗಳನ್ನೇ ತಂದುಕೊಳ್ಳುತ್ತಿರುವನಲ್ಲಾ !"

"ಅಪ್ಪಾ ! ನಮ್ಮ ಗ್ರಹಚಾರ ! ಏನು ಮಾಡುವುದಕ್ಕಾದೀತು ?"

"ಹೌದಮ್ಮಾ ! ಗ್ರಹಚಾರವೆಂದು ಹೀಗೆ ಮಾಡುತ್ತಾ ಬಂದರೆ, ನಾಳೆ ಮಗನ ಲಗ್ನವಾಗಬೇಕೆ ? ಶಾರದೆಯನ್ನು ಕೇಳುವುದಕ್ಕೆ ಎಷ್ಟೋಜನ ಬರುತ್ತಿದ್ದಾರೆ. ನಿನ್ನ ಮನಸ್ಸನ್ನು ನೋಯಿಸಬಾರದೆಂದು ನಾನು ಇದ್ದೇನೆ. ಮಗುವಿಗೆ ವಯಸ್ಸಾ ಗುತ್ತಾ ಬಂದಿತು. ಲೋಕಕ್ಕೆಲ್ಲಾ ಧರ್ಮಶಾಸ್ತ್ರಗಳನ್ನು ಹೇಳುತ್ತಿರುವ ನಾನೇ ಹೀಗಿದ್ದರೆ ನಾಳೆ ನಾಲ್ಕು ಜನರ ಮುಂದೆ ಬಾಯಿ ತೆರೆಯುವುದಕ್ಕಾದೀತೆ ? ನಿನ್ನ ತೀರ್ಮಾನವೊಂದಾದರೆ ....!"

"ಅಪ್ಪಾ ! ನನ್ನ ತೀರ್ಮಾನವೇನು ? ನಿನ್ನ ಇಷ್ಟ. ನನಗೆ ಕಮಲೆಯೊಂದಲ್ಲ, ಶಾರಿಯೊಂದಲ್ಲ. ಅವಳ ಸುಖವನ್ನು ನಾನು ನೋಡಲಾರೆನೆ ? ಅನುಕೂಲವಾದ ಕಡೆ ಕೊಟ್ಟು ಲಗ್ನ ಮಾಡು."

"ನನಗೆ ಹೇಳುವ ತೀರ್ಮಾನವಿದೇನೋ. ಇದು ನಿನ್ನ ತ್ರಿಕರಣಶುದ್ಧವೊ ?"

"ನನ್ನ ತ್ರಿಕರಣಶುದ್ಧವೆಂದರೆ ಮಲ್ಲನನಿಗೆ ಲಗ್ನ ಮಾಡಿಕೊಳ್ಳುವುದೇ ! ಹಾಗಾಗಬೇಕಾದರೆ ಭಾಗವತವು ಧೊರೆಗಳಿಗೆ ಅಂಕಿತವಾಗಬೇಕು. ಅದು ನಡೆಯು

ವುದಲ್ಲ. 'ತಾನೂ ತಿನ್ನ ಪರರಿಗೂ ಕೊಡ' ಎಂಬಂತೆ ಮಾತನಾಡಿದರೆ ಉಪಯೋಗ ವೇನು ?

"ಅದಕ್ಕಾಗಿ ನೀನೂ ಪ್ರಯತ್ನ ಮಾಡಿ ನೋಡು. ಎಲ್ಲಿಗೂ ಸಾಧ್ಯವಾಗ ದಿದ್ದರೆ ನೋಡೋಣ."

"ಯತ್ನ ಮಾಡಿದ ಹಾಗೆಯೇ! ಸುಮ್ಮನೆ ಚಪಲ ಅಷ್ಟೆ!"

ಹೀಗೆಂದು ಮಾತನಾಡುತ್ತಾ ಇಬ್ಬರೂ ಕಣ್ಣೀರಿಟ್ಟು ಹೊರಟರು. ಇನ್ನೂ ಕತ್ತಲಾಗಿರಲಿಲ್ಲ. ಪಶ್ಚಿಮಾಂಗನೆಯು ತನ್ನ ಅಲಂಕಾರಗಳನ್ನು ಮುಗಿಸಿದ್ದಳು. ಮಾಯೆಯು ಪ್ರಪಂಚವನ್ನೆಲ್ಲಾ ಆವರಿಸುತ್ತದೆ. ಅದರ ಬಲೆಗೆ ಬೀಳಹಂತೆ ಎಚ್ಚರ ವಾಗಿರಿ. ಎನ್ನುವಂತೆ ಪಕ್ಷಿಗಳ ಚಿಲಿಪಿಲಿ ಧ್ವನಿ. ಶರೀರ ಪೋಷಣೆಗಾಗಿ ಮಾಯಾ ಪ್ರಪಂಚದ ನಿಮ್ಮ ನಾಟಕಕ್ಕೆ ತೆರೆಯು ಬಿದ್ದಿತು. ಇನ್ನು ಪಾರಮಾರ್ಥಿಕವಾದ ಆನಂದಕ್ಕೆ ಕಾಲವು ಬಂತೆಂದು ಸೂಚಿಸುವಂತೆ ಎಲ್ಲರ ಮುಖದಲ್ಲಿಯೂ ಆನಂದ ವಿಕಾಸ. ವಿಷ್ಣು ಮಾಯಾ ವಿಲಾಸವನ್ನು ನೋಡಬೇಕಾದರೆ ನಾವೂ ಮಾರ್ಗ ದರ್ಶಕರೆನ್ನುವ ಹಾಗೆ ಅಲ್ಲಲ್ಲಿ ಸಣ್ಣ ಸಣ್ಣ ತಾರೆಗಳ ಶೋಭಾಯಮಾನ. ಈ ಸಂಧ್ಯಾರಾಗದ ಸೊಂಪನ್ನು ನೋಡುತ್ತಾ ಶ್ರೀನಾಥನು ಹೊರಗೆ ಬಂದನು. ಈತನು ಬರುತ್ತಲೇ ಸತ್ಪುರುಷರಿಗೆ ಕೊಟ್ಟ ತೊಂದರೆಯ ಪಾಪವು ಸುಮ್ಮನೆ ಹೋಗುವುದೇ! ಅದು ತಾಮ್ರದಲ್ಲಿ ಬರೆದ ಶಾಸನದಂತೆ ಶಾಶ್ವತವೆಂಬುದನ್ನು ಲೋಕಕ್ಕೆಲ್ಲಾ ತೋರಿ ಸಲು ಲಾಂಛನದಿಂದ ಕೂಡಿದ ಚಂದ್ರನು ಪ್ರವೇಶಿಸಿದನು. ದೇವರ ಮಂಗಳಾರತಿ ಯನ್ನು ಮಾಡಿಕೊಂಡು ಪುರಾಣಕ್ಕೆ ಹೋಗಬೇಕೆಂದು ತನ್ನವರನ್ನೆಲ್ಲಾ ಕೂಗಿದ ಪೋತನ. ಶಾರದೆಯಲ್ಲದೆ ಯಾರೂ ಬರಲಿಲ್ಲ. ಆಕೆಯ ಮುಖವೂ ದೀನ ಭಾವ ದಿಂದಿದ್ದಿತು. ಮಲ್ಲನನಿಗೆ ಯಾವುದೋ ಯೋಚನೆ. ದನದ ಕೊಟ್ಟಿಗೆಯಲ್ಲಿದ್ದ ಜೋಳದ ಕಡ್ಡಿಗಳನ್ನು ಎಣಿಸುತ್ತಿದ್ದನು. ಕಮಲೆಯು ಅಷ್ಟರಲ್ಲಿಯೇ ಬಂದು,

"ಅಪ್ಪಾ! ಅಮ್ಮಾ ಮಲ್ಲಣ್ಣ ಏನೋ ಯೋಚನೆಯಲ್ಲಿದ್ದಾರೆ" ಎಂದಳು. ಶಾರದೆಯು ಅಲ್ಲಿಂದ ಹೊರಟಳು. ಪೋತನನಿಗೆ ಮನಸ್ಸೇ ಒಂದು ವಿಧವಾಯಿತು. ಸನ್ನಿವೇಶ ಬಲದಿಂದ ಎಂತಹ ಹೃದಯವಾದರೂ ಪರಿವರ್ತನೆಯಾಗುವುದೇ ಅಲ್ಲವೆ? ಮೇನಕೆಯ ದರ್ಶನದಿಂದ ವಿಶ್ವಾಮಿತ್ರನ ಘೋರ ತಪಸ್ಸೇನಾಯಿತು? ಸತ್ಯ ಧರ್ಮಗಳ ನೆಲೆಯೆನಿಸಿದ್ದ ನಳ ಮಹಾರಾಜನು ಪಗಡೆಯಾಡಲು ಕಾರಣ ವೇನು? ಶ್ರೀರಾಮನು ವಾಲಿಯನ್ನು ಕೊಂದದ್ದು ಯಾವ ಕಾರಣದಿಂದ? ತನ್ನ ಬಾಯಿಂದ ಸುಳ್ಳನ್ನೇ ಹೇಳದಿದ್ದ ಧರ್ಮರಾಜನು 'ಅಶ್ವತ್ಥಾಮೋಹತಃ ಕುಂಜರಃ' ಎಂದುದು ಕಾರಣವಿಲ್ಲದೆಯೇ ಅಲ್ಲ. ಹೀಗಾಯಿತು ಪೋತನನ ಅವಸ್ಥೆ. ಮಂಗ ಳಾರತಿಯನ್ನು ಮುಗಿಸಿಕೊಂಡು ಹೊರಗೆ ಬಂದು, ಲಕ್ಷ್ಮಿಯ ಮುಖವನ್ನು ನೋಡಿ

ದನು. ಪ್ರಪಂಚವೇ ತನಗೆ ಬೇಡವೆಂಬ ಭಾವವನ್ನು ಸೂಚಿಸುತ್ತಿದ್ದಿತು. ಗ್ರಹಣ ಹಿಡಿದ ಚಂದ್ರನಂತಿರುವ ಮುಖ. ಮಲ್ಲನನನ್ನು ನೋಡಿದನು. ಎಷ್ಟು ಕೆಲಸ ವನ್ನು ಮಾಡಿದರೂ ತನ್ನ ಗತಿ ಇಷ್ಟೇ! ಎಂಬ ತಿರಸ್ಕಾರವೇ ತೋರುತ್ತಿದ್ದಿತು. ಇವರ ಸ್ಥಿತಿಗಳನ್ನು ನೋಡುತ್ತಾ ತನ್ನ ಮನಸ್ಸಿನಲ್ಲಿ 'ಈ ಸಂಸಾರಕ್ಕೆ ನಾನೇ ಅಲ್ಲವೇ ಸೂತ್ರಧಾರಿ. ಯಾರಯಾರ ಉದ್ದಿಶ್ಯಗಳು ಹೇಗಿವೆ? ಎಂಬುದನ್ನು ತಿಳಿದು ಅದನ್ನು ಸಾಧ್ಯವಾಗುವವರೆಗೆ ನಡೆಯಿಸದಿದ್ದರೆ ನನ್ನ ಗೃಹಸ್ಥ ಧರ್ಮದ ಕಾರ್ಯವು ಮುಗಿಯಿತೆ? ಈ ಆಟವನ್ನು ಶ್ರೀರಾಮನೇ ಲೋಕಕ್ಕೆ ಪ್ರದರ್ಶನ ಮಾಡಿ ತೋರಿಸಿರಲಿಲ್ಲವೆ? ಅದನ್ನು ಹಗಲಿರುಳೂ ನಾನು ನೋಡುತ್ತಲೇ ಇದ್ದೂ ಸುಮ್ಮ ನಿರುವುದು ಯಾವ ನ್ಯಾಯ? ಇವರನ್ನು ಸಂತೈಸಬೇಕಾದರೆ ಅವಾಚ್ಯವಾದ ಕಾರ್ಯವನ್ನು ಮಾಡಬೇಕಲ್ಲವೆ? ಅದು ಧರ್ಮ ವಿರುದ್ಧ, ಧರ್ಮದ ದಾರಿಯೇ ತಿಳಿಯದೆ ಪರಿತಪಿಸುತ್ತಿರುವ ಈ ಜನರ ಮಧ್ಯದಲ್ಲಿ ರಾಮನು ನನ್ನನ್ನೇಕೆ ಇಟ್ಟಿರುವನು? ಇದರಿಂದ ಅವನಿಗಾಗುವ ಆನಂದವೇನೋ?' ಎಂದು ಚಿಂತೆಯಿಂದ ಲಕ್ಷ್ಮಿ ಯನ್ನೂ ನೋಡಿ,

"ಲಕ್ಷ್ಮೀ! ನಿನ್ನ ವ್ಯಾಕುಲವು ಒಳ್ಳೆಯದಲ್ಲ. ಲೋಕದ ಎಲ್ಲಾ ಕಾರ್ಯ ಗಳೂ ರಾಮನ ಇಚ್ಛೆಯಂತೆ ನಡೆಯುವುವು."

"ರಾಮ! ರಾಮ! ನಿಮ್ಮ ರಾಮನಿಗೂ ನಿಮಗೂ ಸರಿ! ಆ ರಾಮನು ನಂಬಿ ದವರನ್ನೆಲ್ಲಾ ಕುದಿಸುತ್ತಿರುವನು. ಅವನನ್ನು ನಂಬಿ ಬದುಕಿದವರೇ ಇಲ್ಲ."

"ಹಾಗನ್ನಬಾರದು. ಪ್ರಾರಬ್ಧ ಕರ್ಮವನ್ನು ಎಲ್ಲರೂ ಅನುಭವಿಸಲೇಬೇಕು."

"ನಿಮ್ಮ ಮಾತುಗಳು ನಿಮಗೇ ಸರಿ! ನಿಮಗೆ ಆನಂದ, ನಮಗೆ ವ್ಯಥೆ."

"ಹೌದು, ವ್ಯಥೆಯಿಲ್ಲದವರಿಗೆ ಆನಂದವೇ! ನೀವೂ ಹಾಗಿರಬೇಕೆಂದೇ ನಾನು ಪ್ರಯತ್ನಪಟ್ಟೆ. ನಿಮ್ಮ ಕರ್ಮ."

"ಕರ್ಮವು ಸತ್ತಮೇಲೆ ಆಗುವುದು. ಅದನ್ನು ಮಾಡಿ ಆನಂದಪಡಿ."

"ಅಯ್ಯೋ ಹುಚ್ಚೀ! ನನಗೆ ಆನಂದವುಂಟು ಮಾಡುವರು ನೀವಲ್ಲ. ನೀವೇ ಆನಂದಪಡಲಾರಿರಿ."

"ಮಲ್ಲನನ ಲಗ್ನವಾದರೆ ನಮಗೆ ಆನಂದ. ಅದನ್ನು ಮಾಡುವುದು ನಿಮ್ಮ ಕೈಲಿದೆ."

"ಅದು ನನ್ನ ಕೈಲೇ ಇಲ್ಲ. ಈಗಲೇ ಮಾಡಬೇಕೆಂದು ಪ್ರಯತ್ನಪಟ್ಟರೂ ಆಗುವುದಿಲ್ಲ."

" ಆಗ ದೇವನು ಭಾಗವತವೊಂದನ್ನು ಆ ಧೊರೆಗೆ........"

ಈ ಮಾತು ಹೇಳುವಷ್ಟರಲ್ಲಿಯೇ ಪೋತನನಿಗೆ ಆಕಾಶವೇ ಕಳಚಿ ಮೇಲೆ ಬಿದ್ದಂತಾಯಿತು. ಲಕ್ಷ್ಮಿಗೆ ಏನು ಹೇಳಬೇಕೆಂಬುದೇ ತೋರದಂತಾಯಿತು. ಅಲ್ಲಿಂದ ಹೊರಟನು ಎಲ್ಲಿ ಏನಿದೆ ಏನಿಲ್ಲ ಎಂಬುದೇ ಆತನಿಗೆ ತಿಳಿಯದಂತಿದ್ದಿತು. ಕಣ್ಣುಗಳಲ್ಲಿ ನೀರು ತುಂಬಿದುವು. ತನ್ನ ಸ್ಥಿತಿಯನ್ನು ಇತರರು ನೋಡಿದರೆ ಪರಿಹಾಸ್ಯವಾಗಬಹುದೆಂದು ಹಿತ್ತಲಿಗೆ ಬಂದನು. ಮರದ ಕೆಳಗೆ ಕುಳಿತನು. ಪ್ರಪಂಚವೇ ಸಾಕೆಂಬ ಯೋಚನೆ! ಸಂಸಾರವೆಂಬ ಅರಣ್ಯದಲ್ಲಿ ಸತಿ ಸುತರೆಂಬ ಘಟಸರ್ಪಗಳು. ಅರಿವನ್ನು ಹೊಂದಲಿರುವ ಜೀವಾತ್ಮನನ್ನು ಪ್ರತಿ ನಿಮಿಷದಲ್ಲಿಯೂ ಕಚ್ಚುತ್ತಲೇ ಇರುವುವೆಂದೂ ಆ ಬಾಧೆಯನ್ನು ಸಹಿಸಲಾಗುವುದೇ ಇಲ್ಲವೆಂದೂ ಆತನಿಗೆ ಸಿಧ್ಧಾರವಾಯಿತು. ಇದಕ್ಕೆ ತಕ್ಕ ಔಷಧವೇನೆಂದುಕೊಳ್ಳುವನು. ಔಷಧದಿಂದಲ್ಲ. ಮಹಾ ಮಂತ್ರದಿಂದ ಇದು ಸಾಧ್ಯ! ಎಂದು ಮತ್ತೆ ಆಲೋಚನೆ. ಅಂತಹ ಮಹಾ ಮಂತ್ರವನ್ನು ತನಗೆ ಬೋಧಿಸುವರು ಯಾರು ? ಅಂದುಕೊಳ್ಳುತ್ತಾ ತಲೆಯಲ್ಲಾಡಿಸುವನು. ಭಾಗವತವನ್ನು ಸಿಂಗನಭೂಪಾಲನಿಗೆ ಹಾಕಿದರೆ ಮಲ್ಲನನ ಲಗ್ನ ಹಾಕುವುದೆ ? ಛೀ ! ಛೆ ! ವಿಶ್ವವೇ ತಲೆಕೆಳಗಾದರೂ ಆ ಕಾರ್ಯವನ್ನು ಈ ಹಾಳು ಕೈಗಳಿಂದ ಮಾಡಲಾರೆ ಎಂದು ಭ್ರಾಂತಚಿತ್ತನಾಗುವನು. ಆತನ ಕಣ್ಣುಗಳಲ್ಲಿ ನೀರು ಪ್ರವಾಹವಾಗಿ ಹರಿಯುತ್ತಲೇ ಇದ್ದಿತು. ಪುರಾಣದ ಮಾತನ್ನೇ ಮರೆತನು. ಅಷ್ಟರಲ್ಲಿ ಆತನ ಮುಂದೆ ಒಂದು ವ್ಯಕ್ತಿಯು ಕಾಣಿಸಿತು. ಸುಂದರವೂ ಸೌಮ್ಯವೂ ಆದ ಹಣೆ. ದೀರ್ಘವಾದ ಕೇಶರಾಶಿ! ತಲೆಯಮೇಲೆ ಕಿರೀಟ, ಒಂದು ಕೈಯಲ್ಲಿ ವೀಣೆ, ಮತ್ತೊಂದು ಕೈಯಲ್ಲಿ ಪುಸ್ತಕ, ವರದ ಅಭಯ ಹಸ್ತಗಳೆರಡು. ಪೀತಾಂಬರಧಾರಿಯಾಗಿ ಕಣ್ಣೀರಿಡುತ್ತಾ ಪೋತನಾಮಾತ್ಯನನ್ನು ನೋಡಿ,

" ಅಪ್ಪಾ ! ಕನ್ಯಾ ವಿಕ್ರಯ...." ಎಂದು ಗದ್ಗದ ಕಂಠಳಾದಳು. ತುಟಿಗಳು ಅದರುತ್ತಿದ್ದುವು. ಇದನ್ನೂ ಕಣ್ಣಾರೆ ಕಂಡ ಪೋತನ ತನ್ನ ಕೈಗಳೆರಡನ್ನೂ ಚಾಚಿ ಗದ್ಗದ ಕಂಠನಾಗಿ,

ಚಂ॥ ಕಾಟುಕ ಕಂಟಿನೀರು ಚನು ಗಟ್ಟು ಪಯಿಂಬಡನೇಲ ಯೇಡ್ಚೆದೋ ।
ಕೈಟಭವೈತ್ಯಮರ್ದನುನಿ ಗಾದಿಲಿಕೋಡಲ ಯೋಮುದಂಬ ಯೋ ॥
ಹಾಟಕಗರ್ಭುರಾಣಿ ನಿನು ನಾಕಟಿಕಿಂ ಗೊನಿಪೋಯಿ ಯಲ್ಲ ಕ ।
ರ್ಣಾಟ ಕಿರಾಟ ಕೀಚಕುಲಕಮ್ಮ ತ್ರಿಶುದ್ಧಿಗ ನಮ್ಮು ಭಾರತೀ ॥

ಈ ಪದ್ಯವನ್ನು ಹೇಳಿ ಕಣ್ಣೀರಿಡುತ್ತಾ ಸಾಷ್ಟಾಂಗ ನಮಸ್ಕಾರ ಮಾಡಿ ಮೇಲ ಕ್ಕೆದ್ದನು. ಆ ವ್ಯಕ್ತಿಯು ಅಗೋಚರ. ಇದೇ ವ್ಯಥೆಯಿಂದಲೇ ದೇವಾಲಯಕ್ಕೆ ಬಂದು ಆ ದಿನ ಕನ್ಯಾವಿಕ್ರಯದ ವಿಚಾರವನ್ನೇ ಉಪನ್ಯಾಸ ಮಾಡಿದನು.

ಶ್ರೀನಾಥನೇ ಮೊದಲಾದ ಕವಿಗಳು ಇದ್ದರು. ತನ್ನ ಉಪನ್ಯಾಸದಲ್ಲಿ ಕನ್ಯೆಗೂ ಕಾವ್ಯಕ್ಕೂ ಸಂಬಂಧಿಸಿದ್ದನ್ನು ಕೇಳಿ ಇವರಿಗೆಲ್ಲಾ ವ್ಯಥೆಯಾಯಿತು. ಪೋತನ ಸಾಮಾನ್ಯನಲ್ಲವೆಂದೂ ನಿಜವಾದ ಭಕ್ತಾಗ್ರಣಿಯೆಂದೂ ಅವರೆಲ್ಲರೂ ನಂಬಿದರು. ಕಡೆಯಲ್ಲಿ ಕ್ಷಮೆಯನ್ನು ಬೇಡಿದರು.

## ಶ್ರೀರಾಮಚಂದ್ರನ ಲೀಲೆ

ಸಿಂಗನಭೂಪಾಲನಿಗೆ ಭಾಗವತದ ಅಂಕಿತವು ತನ್ನ ಹೆಸರಿಗೆ ಆಗಲಿಲ್ಲವಲ್ಲಾ ! ಎಂಬ ಚಿಂತೆಯು ಬಲವಾಯಿತು. ಅದೇ ಕ್ರೋಧ ರೂಪವನ್ನು ತಾಳಿತು. ಎಷ್ಟು ಮಾತ್ರದ ಪೋತನ! ದನ ಕಾಯುವ ಒಬ್ಬ ಹಳ್ಳಿಯವ! ಅವನು ರಾಜಾಜ್ಞೆಯನ್ನು ಮೀರಿ ನಡೆಯುವುದೆ? ಇವನಿಗೆ ಹೆದರಿ ನಾನು ಸುಮ್ಮನಿರುವುದೆ? ಇನ್ನು ನನ್ನ ಮಾತನ್ನು ಕೇಳುವವರು ಯಾರು? ಸಾಧಿಸಲು ಹೋದ ಕವಿಗಳು ಅವನ ಮನೆಯಲ್ಲಿಯೇ ಚನ್ನಾಗಿ ತಿಂದುಕೊಂಡಿದ್ದಾರೆ. ಆಗಲಿ ನನ್ನ ಪ್ರಭಾವವನ್ನು ನೋಡಲಿ ಎಂದು ಕೆಲವು ಮಂದಿ ಭಟರನ್ನು ಕರೆಯಿಸಿ, ಭಾಗವತವನ್ನು ತರಲು ಆಜ್ಞೆ ಮಾಡಿದನು. ಆಗಲೇ ಹೊರಟ ಭಟರು ಅರ್ಧ ರಾತ್ರಿಯ ಸಮಯಕ್ಕೆ ಸರಿಯಾಗಿ ಏಕಶಿಲಾ ನಗರಕ್ಕೆ ಬಂದು ಪೋತನಾಮಾತ್ಯನ ಮನೆಯನ್ನು ನೋಡಿದರು. ಅವರಿಗೆ ಪರಿಹಾಸ್ಯವಾಯಿತು. ಈ ಮುರುಕುಲು ಗುಡಿಸಲಿನಲ್ಲಿರುವವನಿಗೆ ಭಯಪಟ್ಟು ಇಷ್ಟು ಜನ ಬಂದುದು? ಒಬ್ಬರಾಗಿದ್ದರೆ ಸಾಲದಾಗಿದ್ದಿತೆ? ಎಂದು ಆ ಮನೆಯನ್ನು ಧ್ವಂಸ ಮಾಡಬೇಕೆಂಬ ರೋಷದಿಂದ ಬಾಗಲಿನ ಹತ್ತಿರಕ್ಕೆ ಬಂದರು. ಅಲ್ಲೊಂದು ಸಣ್ಣ ಕೋತಿಯು ಬಾಗಿಲನ್ನು ಕಾಯುತ್ತಿದ್ದಿತು. ಅದನ್ನು ಬೆದರಿಸಿದರು. ಅದು ರೌದ್ರ ರೂಪವನ್ನು ತಾಳಿ ಎಲ್ಲರನ್ನೂ ಭೂಮಿಗೆ ಸಮರ್ಪಣೆ ಮಾಡಿಬಿಟ್ಟಿತು. ಸೈನಿಕರ ಆಟವೂ ಮುಗಿಯಿತು.

ಹತಶೇಷರಾದವರು ದೊರೆಯಲ್ಲಿಗೆ ಹೋಗಿ ತಮ್ಮ ಅವಸ್ಥೆಯ ಅನುಭವವನ್ನೆಲ್ಲಾ ಹೇಳಿಕೊಂಡರು. ದೊರೆಗೆ ಯೋಚನೆಗಳು ಬಲವಾದುವು. ಅಲ್ಪವಾದ ವಿಷಯವು ಎಷ್ಟು ಪ್ರಮಾದಕ್ಕೆ ಬಂದಿತೆಂದುಕೊಂಡನು. ಕೂಡಲೇ ಮಂತ್ರಿಯನ್ನೂ ಸೈನ್ಯಾಧಿಕಾರಿಯನ್ನೂ ಕರೆಯಿಸಿ ನಡೆದ ವಿಚಾರವನ್ನೆಲ್ಲಾ ತಿಳಿಸಿದನು. ಅವರೂ ಯೋಚನೆ ಮಾಡಿ ಕಡೆಗೆ ತಾವೇ ಹೋಗಿ ವಿಷಯವನ್ನು ನಿರ್ಣಯ ಮಾಡಬೇಕೆಂದು ಹೊರಟರು.

ಬೆಳಗಾಗುತ್ತಲೇ ಏಕಶಿಲಾನಗರದವರು ಪೋತನಾಮಾತ್ಯನ ಮನೆಯ ಮುಂದೆ ಬಂದು ನೋಡಿದರು. ಹೆಣಗಳ ರಾಶಿಯು ಹೇಳತೀರದಂತಿದ್ದಿತು. ಭಯಪಟ್ಟರು. ಅವರೆಲ್ಲರೂ ಸೈನಿಕರೇ ! ಇವರನ್ನು ಕೊಂದವರು ಯಾರು ? ಯಾರಿಗೂ ತಿಳಿಯದ ವಿಚಾರ? ಯಾವ ವೈರಿಯನ್ನು ಜೈಸಲು ಬಂದು ಇಲ್ಲಿ ಹತರಾದರೆಂದು ಆಡಿಕೊಳ್ಳ

ಲಾರಂಭಿಸಿದರು. ಇದು ತಮ್ಮ ಮೇಲೆಲ್ಲಿ ಬರುವುದೋ ಎಂಬ ಅನುಮಾನ ಬೇರೆ, ಇಷ್ಟಾಗುವ ವೇಳೆಗೆ ಪೋತನಾಮಾತ್ಯನೂ ಮನೆಯಿಂದ ಹೊರಗೆ ಬಂದನು. ಎಲ್ಲವನ್ನೂ ನೋಡಿದನು. ಆಶ್ಚರ್ಯವೇ ಆಯಿತು. ಎಲ್ಲವೂ ಶ್ರೀರಾಮಚಂದ್ರಮೂರ್ತಿಯ ಲೀಲೆಯೆಂದು ಅಂದುಕೊಂಡನು. ಊರಿನವರಿಗೆಲ್ಲಾ ಭಯ; ಯಾರ ಬಾಯಲ್ಲಿಯೂ ಇದೇ ಮಾತು. ಕೋದಂಡರಾಮನ ದಯವು ಹೇಗಿರುವುದೋ ಎಂಬ ವ್ಯಥೆ! ಹೀಗಾಗಿ ಎಲ್ಲರೂ ತಳಮಳಗೊಳ್ಳುತ್ತಾ ಆಹಾರವಿಲ್ಲದೆ ಅಂದು ಕಳೆದರು. ಸಾಯಂಕಾಲವಾಯಿತು. ಎಲ್ಲರೂ ಬಾಗಿಲುಗಳನ್ನು ಹಾಕಿ ಮಲಗಿಬಿಟ್ಟರು. ಹೊರಗೆ ಬರುವ ಧೈರ್ಯವು ಯಾರಿಗೂ ಇಲ್ಲ.

ಸಿಂಗಭೂಪಾಲನು ಸಾಯಂಕಾಲದ ವೇಳೆಗೆ ಮಂತ್ರಿ ಸೈನ್ಯಾಧಿಕಾರಿಗಳೊಡನೆ ಕೆಲವು ಸೈನ್ಯವನ್ನು ಕರೆದುಕೊಂಡು ಏಕಶಿಲಾ ನಗರವನ್ನು ಪ್ರವೇಶಿಸಿದನು. ಊರೆಲ್ಲಾ ನಿಶ್ಶಬ್ದವಾಗಿದ್ದಿತು. ಪೋತನಾಮಾತ್ಯನ ಮನೆಯ ಮುಂದೆ ರಾಶಿ ರಾಶಿಯಾಗಿ ಬಿದ್ದಿದ್ದ ಹೆಣಗಳನ್ನು ನೋಡಿ ಆತನ ರೋಷವು ಮಿತಿಮೀರಿತು. ಈ ಪಾಪಿ ಪೋತನನನ್ನೇನು ಮಾಡಬೇಕೆಂದು ಸೈನಿಕರಿಗೆ ಅವನ ಮನೆಯನ್ನು ಸುಡುವಂತೆ ಆಜ್ಞೆ ಮಾಡಿದನು. ಅವರೆಲ್ಲರೂ ಆಯುಧಪಾಣಿಗಳಾಗಿ ಮನೆಯ ಮುಂದಕ್ಕೆ ಬಂದರು. ಆಗ ನಡೆದ ಆಶ್ಚರ್ಯವು ಹೇಳತೀರದು. ಮನೆಯ ಮುಂದುಗಡೆ ಒಂದು ಕೋತಿಯು ಸುಳಿಯುತ್ತಿತ್ತು. ಇವರನ್ನು ನೋಡಿದಕೂಡಲೇ ಅದಕ್ಕೂ ರೋಷವು ಹೆಚ್ಚಿತು. ಬೆಳೆಯಲು ಮೊದಲಾಯಿತು.

ಭಾ॥ಷ॥ ಒಡನೆ ಬೆಳೆದುದು ಕಪಿಯು ಲೋಕದ । ಕಡೆಯ ರುದ್ರನೊ ಬಲಿಯನಣಗಿಸಿ।
ಪೊಡವಿಯಳೆದ ತ್ರಿವಿಕ್ರಮನೊ ವಾಯುವಿನ ಸುತನಿವನೊ ॥
ನಡುಗಿದರು ಸೈನಿಕರು ರಾಯನು । ಪೊಡವಿಯೊಳು ಮಲಗುತ್ತ ಪೋತನ ।
ನಡಿಯಜಾನದಿ ಕೂಗುತಿದ್ದನು ಪೊರೆವುದೆಂದೆನುತ ॥

ಈತನ ಹಾಹಾಕಾರವು ಅತಿಯಾಯಿತು. ಮನೆಯ ಹತ್ತಿರಕ್ಕೆ ಹೋಗಲು ಯಾರಿಗೂ ಧೈರ್ಯವಿಲ್ಲ. ಮಹನೀಯ ಮೂರ್ತಿಯ ಗೊಡವೆಯು ನಮಗೇಕೆಂದು ಎಲ್ಲರೂ ಅಂದುಕೊಂಡರು. ದೈವಭಕ್ತರ ವಿಚಾರವೂ ಮನಸ್ಸಿಗೆ ನಾಟಿತು. ಆಗ ರಾಜನು "ಆಪತ್ಕಾಲೇ ನಾಸ್ತಿ ಮರ್ಯಾದ" ಎಂಬ ಮಾತನ್ನು ಮನಸ್ಸಿಗೆ ತಂದುಕೊಂಡು,

"ಮಹಾತ್ಮಾ! ಪೋತನಾಮಾತ್ಯಾ! ಅಜ್ಞಾನದಿಂದ ನಾವು ದುಡುಕಿದೆವು. ನಮ್ಮ ಸರ್ವಾಪರಾಧಗಳನ್ನೂ ಮನ್ನಿಸಿ ಕಾಪಾಡು" ಎಂದು ಗಟ್ಟಿಯಾಗಿ ಕೂಗಿಕೊಂಡನು. ಕೂಡಲೇ ಪೋತನನು ಹೊರಗೆ ಬಂದನು. ಅಲ್ಲಿ ಯಾರೂ ಇರಲಿಲ್ಲ. ರಾಜನೂ ಮಂತ್ರಿಯೂ ಮೂರ್ಛಿತರಾಗಿ ನೆಲದಮೇಲೆ ಬಿದ್ದಿದ್ದರು. ಅವರನ್ನು

ಉಪಚರಿಸಿದನು. ಎಲ್ಲರೂ ಎದ್ದರು. ಸಿಂಗನಭೂಪಾಲನು ಭಯದಿಂದ ನಡುಗುತ್ತಾ ಪೋತನನ ಪಾದಗಳೆರಡನ್ನೂ ಗಟ್ಟಿಯಾಗಿ ಹಿಡಿದು,

"ಮಹಾತ್ಮಾ! ಕಾಪಾಡು ಕಾಪಾಡು. ನಮ್ಮದು ಸರ್ವಾಪರಾಧ" ಎಂದನು. ಆಗ ಪೋತನನು ಶ್ರೀರಾಮಚಂದ್ರನನ್ನುದ್ದೇಶಿಸಿ ಕೈಗಳನ್ನು ಜೋಡಿಸಿಕೊಂಡು,

"ಆಪದ್ಬಾಂಧವಾ! ರಾಮಚಂದ್ರಾ! ನೀನು ದಯಾಮಯನೆಂಬುದು ನಿಜವಾದರೆ ಆರ್ತತ್ರಾಣ ಪಾರಾಯಣನೆಂಬುದು ಸತ್ಯವೇ ಆದರೆ ನಮ್ಮ ಪ್ರಭುವಿಗೆ ಯಾವ ತೊಂದರೆಯೂ ಇಲ್ಲದಂತೆ ಮಾಡು. ನಿನಗೂ ಈತನಿಗೂ ಇರುವ ವ್ಯತ್ಯಾಸವೇನು? ನೀನು ಲೋಕಪಾಲಕ! ಈತನು ರಾಜ್ಯಪಾಲಕ! ನೀನು ಅನನ್ಯ ಶರಣ್ಯ ಈತನು ಕವಿಜನವರೇಣ್ಯ. ಇಂತಹವನಲ್ಲಿ ಇಷ್ಟು ಕಾಠಿಣ್ಯವನ್ನು ತೋರಿಸುವುದೆ? ಎಂದು ಪ್ರಾರ್ಥಿಸುತ್ತಿರಲು, ರಾಜನ ಪರಿವಾರವೆಲ್ಲಾ ನಿದ್ದೆಯಿಂದೆಚ್ಚೆತ್ತವರಂತೆ ಮೇಲಕ್ಕೆದ್ದರು. ರಾಜನೂ ಮಂತ್ರಿವರ್ಗವೂ ಯಾವ ಹಂಬಲವೂ ಇಲ್ಲದಂತಾಗಿ ಆನಂದ ತುಂದಲಿತವದನಾರವಿಂದದಿಂದ ಪೋತನಾಮಾತ್ಯನಿಗೆ ದೀರ್ಘದಂಡ ಪ್ರಣಾಮವನ್ನು ಮಾಡುತ್ತಾ,

"ಮಹನೀಯನೇ! ನೀನು ಆ ರಾಮಚಂದ್ರಮೂರ್ತಿಯನ್ನು ಒಲಿಸಿಕೊಂಡು ನಿನ್ನ ಇಷ್ಟ ಬಂದಂತೆ ಆಟವಾಡಿಸುತ್ತಿದ್ದೀಯೆ. ಭಕ್ತಪರಾಧೀನನೆಂಬ ಆತನ ಬಿರುದನ್ನು ಲೋಕದಲ್ಲಿ ಸಾರ್ಥಕಪಡಿಸಿರುತ್ತೀಯೆ. ತೊಂದರೆಯನ್ನು ಮಾಡಿದವರಿಗೂ ಉಪಕಾರ ಮಾಡುವ ನಿನ್ನ ಕ್ಷಮಾಗುಣವು ಈ ಲೋಕದಲ್ಲಿ ಮತ್ತಾರಿಗಿದೆ? ಆ ರಾಮಚಂದ್ರಮೂರ್ತಿಯೇ ನೀನಾಗಿರಬೇಕಲ್ಲದೆ ಅನ್ಯಥಾ ಇಲ್ಲ. ಅಜ್ಞಾನದಿಂದ ನಾವು ದುಡುಕಿ ಮಾಡಿದ ಅಪಚಾರಗಳನ್ನು ಮನ್ನಿಸಲಾರೆಯಾ? ಕರುಣಾಸಾಗರಾ! ನಿನ್ನ ಮುಖದಲ್ಲಿ ಕ್ಷಮಾಗುಣವು ಪ್ರಜ್ವಲಿಸುತ್ತಿರುವುದು. ಶಾಂತಿಯು ಮನೆ ಮಾಡಿರುವುದು. ನಮ್ಮನ್ನು ಮನ್ನಿಸು." ಎಂದು ಪ್ರಾರ್ಥಿಸುತ್ತಿರಲು ಪೋತನಾಮಾತ್ಯನು ಪ್ರಸನ್ನವದನದಿಂದ,

"ರಾಜನೇ! 'ಆಗದ್ದಾಗದು' ಎಂಬುದನ್ನು ನೀನು ಕೇಳಿರಲಿಲ್ಲವೆ? ಎಲ್ಲವೂ ಶ್ರೀರಾಮಚಂದ್ರನ ಲೀಲೆ ಆತನು ತನ್ನನ್ನು ಜನರು ಮರೆತಾಗ ಇಂತಹ ಸಂವಿಧಾನಗಳನ್ನು ಕಲ್ಪಿಸಿ ಲೋಕವನ್ನು ಕಾಪಾಡುತ್ತಲೇ ಇರುವನು. ಇದಕ್ಕಾಗಿ ಪಶ್ಚಾತ್ತಾಪವೇಕೆ?"

"ನಿನ್ನಂತಹ ಭಗವದ್ಭಕ್ತರು ಲೋಕದಲ್ಲಿ ವಿರಳ. ದರಿದ್ರಾವಸ್ಥೆಯಲ್ಲಿ ಎಲ್ಲರನ್ನೂ ಮೀರಿಸಿದ್ದರೂ ಬರೆದ ಮಹಾ ಕಾವ್ಯವನ್ನು ಶ್ರೀರಾಮರಿಗೆ ಅಂಕಿತ ಮಾಡಿದ ಮಹಾನುಭಾವಾ! ಇತರರು ನಿನ್ನಂತೆ ಸ್ವಾರ್ಥತ್ಯಾಗಿಗಳಾಗುವುದೆಂದರೇನು?

ನಿನ್ನ ದಯಾಗುಣ ! ಆದರಣೆ! ಲೋಕಸೇವೆ, ನಿಶ್ಚಲವಾದ ಮನಸ್ಸು ಸ್ತುತ್ಯ ವಾಡುವು."

ಎಂದು ಹೇಳಿ ಮತ್ತೆ ಮತ್ತೆ ಅವನಿಗೆ ದೀರ್ಘ ದಂಡ ಪ್ರಣಾಮ ಮಾಡುತ್ತಲೇ ಇದ್ದನು. ಇದನ್ನು ನೋಡಿ ಪೋತನಾಮಾತ್ಯನು ಆನಂದಸಾಗರದ ನಡುವೆ ನಿಂತು,

"ರಾಜನೇ! ಸಕಲರ ಇಷ್ಟಾರ್ಥಗಳನ್ನೂ ಸಲ್ಲಿಸುವುದಕ್ಕಾಗಿ ಹುಟ್ಟಿರುವ ನೀನು ನನ್ನನ್ನು ಸ್ತುತಿಸುವುದೆ? ಮೂರು ಲೋಕಗಳಿಗೂ ಕಾರಣಕರ್ತನಾದ ರಾಮನ ಇಷ್ಟ ದಂತೆ ಎಲ್ಲಾ ಕಾರ್ಯಗಳೂ ನಡೆಯುವುವು. ಕರ್ತನೂ ಭೋಕ್ತನೂ ಆತನೇ. ಲೋಕವು ಮಮಕಾರವನ್ನು ಬಿಟ್ಟಲ್ಲದೆ ಶಾಂತಿಯೆಲ್ಲಿಯದು ! ಶಾಂತಿಯಿಲ್ಲದೆ ಸೌಖ್ಯವೆ ? ಸದಾನಂದವು ಭಕ್ತಿಯಿಂದಲ್ಲದೆ ಹುಟ್ಟಲಾರದು. ಇದು ಸಿದ್ಧ. ಭಕ್ತಿ ಯಿಂದ ವಿರಕ್ತಿ ; ಹಾಗಾದಮೇಲೆ ಮುಕ್ತಿ. ಇವು ಮೂರೂ ಪರಸ್ಪರ ಸಂಬಂಧವುಳ್ಳ ವುಗಳೆಂದು ಮನುಷ್ಯನು ನಂಬಬೇಕು. ಆಗುಹೋಗುಗಳು ಹಿಂದಣ ಕರ್ಮಶೇಷವು. ಅದಕ್ಕಾಗಿ ಪರಿತಾಪವು ಮೌಢ್ಯವು. ನಿನ್ನ ಸಹವರ್ತನೆಯ ಫಲವು ನಮಗೆಲ್ಲಾ ರಾಮಾನುಗ್ರಹದಿಂದ ಉಂಟಾಯಿತೆಂದು ಹೇಳಿದನು.

ಅಂದೇ ಶಾರದೆಯ ವಿವಾಹವೂ ನಿಶ್ಚಯವಾಯಿತು. ಊರಿನವರೆಲ್ಲಾ ಸೇರಿ ದರು. ಸಿಂಗನಭೂಪಾಲನೇ ಆ ಉತ್ಸವದ ಪ್ರಧಾನ ಪಾತ್ರಧಾರಿಯಾದನು. ರಾಜ ಮರ್ಯಾದೆಗಳೆಲ್ಲವೂ ಆ ವಿವಾಹದಲ್ಲಿ ನಡೆದುವು. ಕವಿ ಸಮೂಹದೊಡನೆ ಶ್ರೀನಾಥನು ಮಹಾ ಸಡಗರದಲ್ಲಿದ್ದನು. ವಿವಾಹಾನಂತರ ಸರ್ವಾಲಂಕಾರಭೂಷಿತರಾದ ದಂಪತಿ ಗಳ ಉತ್ಸವ ! ಮುಂದೆ ಪೋತನಾಮಾತ್ಯನ ಭಜನೆಯ ಕೂಟ ! ಆ ದಿನ ನಿಜವಾದ ವೈಕುಂಠವು ಏಕಶಿಲಾನಗರವೇ ! ಸಿಂಗನ ಭೂಪಾಲನು ಮಧ್ಯದಲ್ಲಿ ನಿಂತು,

ಉ॥ ತಮ್ಮಯ ಭಾಗ್ಯವೇತರವದೆನ್ನುತ ಪೇಳ್ದಪ ಮೂಢರಿಂಗೆ ಮಾ ।
ಸಮ್ಮತಿ ನೀಡಿದಾ ಚದುರ ಶಾಂತಿಯೊಳೆಲ್ಲರ ಜೈಸಿ ನಿಷ್ಠೆಯಿಂ ॥
ಬೊಮ್ಮನ ಕಾಂತೆಯಂತಣಿಸಿ ಪೋಗುವ ದೇಹವಿದೆಂದು ಪೇಳುವೀ ।
ಬಮ್ಮೆರ ಪೋತನಾರ್ಯನಲ ಭಾಗ್ಯವ ಸುಸ್ಥಿರಗೈದ ಧೀವರಂ ॥

ಎಂದು ಹೇಳಿದನು. ಅಂತರಿಕ್ಷದಲ್ಲಿ ಪುಷ್ಪವೃಷ್ಟಿಯಾಯಿತು. ಇದಲ್ಲವೇ ಶ್ರೀರಾಮಚಂದ್ರನ ಲೀಲೆ !

ಕಂ॥ ವರದಂ ಸ್ವಭಾನು ಸಂವ । ತ್ಸರದಾ ಕಾರ್ತಿಕದ ಬಹುಳ ದಶಮಿಾ ರವಿವಾ ॥
ಸರದೊಳು ಲಕ್ಷ್ಮಿನೃಸಿಂಹಂ । ಬರೆದಂ ಶ್ರೀರಾಮಭಕ್ತವರನೀ ಕಥೆಯಂ ॥

ಭಾ॥ ಷ॥ ರಾಮ ದನುಜವಿರಾಮ ಮಂಗಳ । ನಾಮ ಭಜಕರ ಕಾಮ ರವಿಕುಲ ।
ಸೋಮ ಪೊರೆಯೊ ವಿರಾಮವಿಲ್ಲದೆ ಭಜಿಪ ಸಜ್ಜನರ ॥
ಭೂಮಿಜಾವರ ಗತಿಯು ನೀನೀ ಭೂಮಿಗೆಲ್ಲಕು ಕವಿಜನಾಲಯ ।
ಧಾಮ ಲಕ್ಷ್ಮಿನೃಸಿಂಹ ಪೂಜಿತ ಲೋಕ ಹಿತಕರನೇ ;

---

ಸಂತೇಕಲ್ಲುಹಳ್ಳಿ ಲಕ್ಷ್ಮೀನರಸಿಂಹಶಾಸ್ತ್ರಿಗಳಿಂದ
ರಚಿತವಾಗಿರುವ ಪುಸ್ತಕಗಳು



೧. ಆತ್ಮತತ್ವ ವಿಚಾರ

೨. ತರಿಗೊಂಡ ವೆಂಕಮ್ಮಾಂಬ

೩. ಜಯಚಾಮನೃಪಾಲನ ರಾಮರಾಜ್ಯವಿಲಾಸ

೪. ಭಾರತಿ ನಾರಣಪ್ಪನವರ ಪರಿಚಯ

೫. ಬಂಗಾಳದ ಬರ-ಸಾಹಿತ್ಯ ಸವಿ

೬. ಬಮ್ಮೆರ ಪೋತನ (ಭಾಗ ೧)



ಸಿಕ್ಕುವ ಸ್ಥಳ

**ಸತ್ಯಶೋಧನ ಪುಸ್ತಕ ಭಂಡಾರ**

**ಕೋಟೆ, ಬೆಂಗಳೂರು.**